# ಸಿದ್ಧಗಂಗಾ



ನನ್ನ ದೇಶಕ್ಕೆ ಈ ವಿಷಯವನ್ನು ಸ್ಪಷ್ಟವಾಗಿ ತಿಳಿಸಬಯಸುತ್ತೇನೆ. ರಾಜಕೀಯವು ಧರ್ಮದಿಂದ ಬಾಹಿರವಲ್ಲ. ಧರ್ಮವೆಂದರೆ ಕುರುಡು ನಂಬಿಕೆಯ ಧರ್ಮವಲ್ಲ. ಸಹಿಷ್ಣುತೆಯ ಧರ್ಮ. ಆದುದರಿಂದ ನೀತಿ ರಹಿತ ರಾಜಕೀಯವನ್ನು ತ್ಯಜಿಸಬೇಕು. ಇದನ್ನು ಕೇಳಿ ಕೆಲವರು ಇದು ಹೇಗೆ ಸಾಧ್ಯ ? ಸಾರ್ವಜನಿಕರ ಕ್ಷೇತ್ರದಿಂದ ವಿರಮಿಸಬೇಕಷ್ಟೇ ಎನ್ನುವವರಿದ್ದಾರೆ. ಯಾರ ಭಾವನೆ ಹೇಗಾದರೂ ಇರಲಿ. ನಾನಂತೂ ಧರ್ಮವನ್ನು ತ್ಯಜಿಸಲಾರೆ; ಸಮಾಜದಲ್ಲಿದ್ದು ಅದರ ನ್ಯೂನತೆಗಳಿಗೆ ಹೊರತಾಗಿ ಬಾಳಬೇಕೆಂದು ಇಚ್ಛಿಸುತ್ತೇನೆ. 'ಈಸಬೇಕು, ಇದ್ದು ಜೈಸಬೇಕು', ಇದು ನನ್ನ ತತ್ವ

—ಸ್ವಾತಂತ್ರ್ಯಕರ್ತ ಗಾಂಧೀಜಿ

ಆಗಸ್ಟ್, ೧೯೭೯

## 'ಸಿದ್ಧಗಂಗಾ ಚಿರಾಯುವಾಗಲೆಂದು

### ಹಣಸಿ ಹಾರೈಸಿರುವ ಆಜೀವ ಸದಸ್ಯರ ಬಳಗ

657 ಶ್ರೀ ರಾಚಪ್ಪ
ಜಯಲಕ್ಷ್ಮೀಪುರಂ,
ಮೈಸೂರು-12

658 ಶ್ರೀ ಎಸ್. ಮತಿದೇವ ಕುಮಾರ
ಜಯಲಕ್ಷ್ಮೀಪುರಂ ಮೈಸೂರು-12

659 ಶ್ರೀ ಆರ್. ಎಸ್. ಕೆರೂರ್. ಬಿ.ಇ
ಜಮಖಂಡಿ
ಬಿಜಾಪುರ ಜಿಲ್ಲೆ

660 ಶ್ರೀ ಹೆಚ್. ಗುರುಶಾಂತಪ್ಪ
ಅಸಿಸ್ಟೆಂಟ್ ಇಂಜಿನಿಯರ್, ಕುಡಚಿ
ಬೆಳಗಾಂ ಜಿಲ್ಲೆ

661 ಶ್ರೀ ಎಸ್. ಬಿ, ಮುದಾಪುರ್. ಬಿ.ಇ
ಅಸಿಸ್ಟೆಂಟ್ ಇಂಜಿನಿಯರ್
ಬೆಳಗಾಂ ಜಿಲ್ಲೆ.

662 ಪ್ರಿನ್ಸಿಪಾಲರು,
ಶ್ರೀ ಸಿದ್ಧಗಂಗಾ ಕಾಲೇಜ್ ಆಫ್ ಎಜುಕೇಷನ್
ತುಮಕೂರು-2

663 ಶ್ರೀ ಜಯದೇವಪ್ಪ, ಶಿಕ್ಷಕರು'
ಸಿದ್ಧಗಂಗಾ ಹೈಸ್ಕೂಲ್, ತುಮಕೂರು

664 ಶ್ರೀ ಕುಮಾರಸ್ವಾಮಿ, ಶಿಕ್ಷಕರು,
ಸಿದ್ಧಗಂಗಾ ಹೈಸ್ಕೂಲ್,
ತುಮಕೂರು-2

665 ಶ್ರೀ ಸೋಮಶೇಖರಯ್ಯ
ಮುಖ್ಯೋಪಧ್ಯಾಯರು,
ಸಿದ್ಧಗಂಗಾ ರೂರಲ್ ಹೈಸ್ಕೂಲ್, ತಂಡಗ
ತುರುವೇಕೆರೆ ತಾ|| ತುಮಕೂರು ಜಿಲ್ಲೆ'

666 ಶ್ರೀ ಪ್ರಭುಶಂಕರ್,
ತುಮಕೂರು.

667 ಶ್ರೀ ಎಂ, ರಾಜಯ್ಯ, ಶಿಕ್ಷಕರು,
ಸಿದ್ಧಗಂಗಾ ಹೈಸ್ಕೂಲ್, ತುಮಕೂರು.

668 ಶ್ರೀ ಎಸ್. ವೈ. ಶಿವಾನಂದಮೂರ್ತಿ,
ಶಿಕ್ಷಕರು, ಸಿದ್ಧಗಂಗಾ ಹೈಸ್ಕೂಲ್
ತುಮಕೂರು.

669 ಶ್ರೀ ಟಿ. ವೆಂಕಟರಾಮಯ್ಯ ಪ್ಲೀಡರ್,
ತುಮಕೂರು

670 ಶ್ರೀ ಟಿ. ಎಂ. ಸರ್ವೇಶ್ವರಯ್ಯ ಶಿಕ್ಷಕರು,
ಸೋಮೇಶ್ವರಪುರಂ ತುಮಕೂರು-2

671 ಶ್ರೀ ಪುಂಡಲೀಕರಾವ್,
ಸೋಮೇಶ್ವರ ಎಕ್ಸ್‌ಟೆನ್ಷನ್
ತುಮಕೂರು.

672 ಶ್ರೀ ಡಿ. ವಿ. ಚನ್ನರಸಪ್ಪ, ಮರ್ಚೆಂಟ್
ದೇವನಹಳ್ಳಿ
ಬೆಂಗಳೂರು ಜಿಲ್ಲೆ.

[ಮುಂದುವರಿಯುವುದು]



## ಶ್ರೀವಾಣಿ

ನಮ್ಮ ಭರತ ಖಂಡದ ಆರ್ಯ ಜನಾಂಗ ವಿಶ್ವ ವ್ಯಾಪಕ ಮತ್ತು ವಿಶ್ವಾತೀತನಾದ ಪರಮಾತ್ಮನೊಡನೆ ಬೆರೆಯುವ ಪ್ರಯತ್ನವನ್ನು ಬಹುಕಾಲದಿಂದಲೂ ಬೆಳೆಸಿಕೊಂಡು ಬಂದಿದೆ. ಈ ವಿಚಾರವನ್ನು ಮಹಾನ್ ದಾರ್ಶನಿಕರಾದ ಶ್ರೀ ಅರವಿಂದರು ತಮ್ಮ 'Life Divine" ಎಂಬ ಗ್ರಂಥದಲ್ಲಿ ಕೂಲಂಕುಶವಾಗಿ ವಿಚಾರ ಮಾಡಿದ್ದಾರೆ. ಮಾನವನು ತನ್ನ ಪರಮ ಗುರಿಯತ್ತ ಸಾಗುವ ಅಂತರಿಕವಾದ ನಾಲ್ಕು ದಿವ್ಯ ಪಥಗಳನ್ನು ಅಲ್ಲಿ ವಿವರಿಸಿದ್ದಾರೆ. ಅವುಗಳಾವುವೆಂದರೆ ಧರ್ಮ (Religion), ಗೋಚರ ವಸ್ತುಗಳ ಉಪಾಸನೆ (Occultision) ಆಧ್ಯಾತ್ಮಿಕ ತತ್ವ ಜಿಜ್ಞಾಸೆ (Spiritual thought) ಮತ್ತು ಅನುಭವ (Inner Spiritual Experience). ಈ ನಾಲ್ಕು ಮಾರ್ಗಗಳಲ್ಲಿ ಮೊದಲನೆಯ ಮೂರು ಮಾರ್ಗಗಳು ಸಾಧನಾ ರೂಪಗಳು ಮಾತ್ರ. ಪರಂತು ನಾಲ್ಕನೆಯ ಪಥ ಸಿದ್ಧಿರೂಪವಾದದು. ಈ ನಾಲ್ಕು ಪಥಗಳು ಪರಸ್ಪರ ಪೂರಕವೇ ಹೊರತು ಮಾರಕವಲ್ಲ. ಆದರೆ ಯಾವ ಧರ್ಮವೇ ಆಗಲಿ ಅದು ಅನುಭಾವದ ಮಟ್ಟಕ್ಕೇರದಿದ್ದರೆ ಫಲಪ್ರದವಾಗುವುದಿಲ್ಲ. ಪ್ರಕೃತ ಅನುಭಾವವೆಂದರೆ ಕೇವಲ ಬಾಹ್ಯ ವಸ್ತುಗಳಿಂದ ಬರುವ ಅನುಭಾವವಲ್ಲ. ಏಕೆಂದರೆ ಆ ಬಾಹ್ಯ ವಸ್ತುಗಳ ಅನುಭವದಿಂದ ಬರುವ ಸಂತೃಪ್ತಿಯೇ ಮಾನವನಿಗೆ ಪರಮ ಗುರಿಯಾಗಿರುವುದಿಲ್ಲ. ಮೇಲಾಗಿ ಅನುಭವವೆನ್ನುವುದು ಸತ್ಯಾನ್ವೇಷಣೆಯ ಅಂತರಿಕ ದೃಷ್ಟಿ. ಅದು ಭಾವನೆಗೆ ಸಂಬಂಧ ಪಟ್ಟದ್ದು ಮತ್ತು ತರ್ಕಾತೀತವಾದುದು. ಮಿಂಚಿನಂತೆ ಪ್ರಕಾಶಮಾನವಾದ ದರ್ಶನದ ಗ್ರಹಿಕೆಯೇ ಅನುಭಾವಿಗಳ ಪ್ರಯತ್ನ ಮತ್ತು ಗುರಿ.

# ‘ಸಿದ್ಧಗಂಗಾ’

ಆಗಸ್ಟ್, ೧೯೭೯

ಸಂಪುಟ-೧೫ ಸಂಚಿಕೆ-೮

ಪ್ರಕಾಶಕರು
ಹೆಚ್. ಬಿ. ಗಂಗಾಧರಯ್ಯ
ಹಳೆಯ ವಿದ್ಯಾರ್ಥಿಸಂಘದ ಪರವಾಗಿ

ಸಂಪಾದಕ ಮಂಡಲಿ
ಪಂ|| ಚನ್ನಪ್ಪ ಎರೇಸೀಮೆ
ಪಿ. ಎನ್. ಚಂದ್ರಶೇಖರಯ್ಯ
ವಿರೂಪಾಕ್ಷಯ್ಯ
ಬಸವರಾಜು

ಜಾಹಿರಾತು ವ್ಯವಸ್ಥಾಪಕರು
ಎಂ. ರೇಣುಕಾರಾಧ್ಯ

ಮುದ್ರಕರು
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ

ಪ್ರಕಟಣೆಯ ಸ್ಥಳ
ಶ್ರೀ ಸಿದ್ಧಗಂಗಾ ಕ್ಷೇತ್ರ

ಚಂದಾ ವಿವರ
ಆಜೀವ ಸದಸ್ಯತ್ವ: 151-00 ರೂ
ವಾರ್ಷಿಕ ಚಂದಾ: 10-00 ರೂ

## ಈ ಸಂಚಿಕೆಯಲ್ಲಿ



### ಲೇಖಕರಲ್ಲಿ ಮನವಿ

‘ಸಿದ್ಧಗಂಗಾ’ ಲೇಖಕರಿಂದ ಧಾರ್ಮಿಕ, ಸಾಂಸ್ಕೃತಿಕ ಐತಿಹಾಸಿಕ ಹಾಗೂ ವೈಚಾರಿಕ ಲೇಖನಗಳು, ಸಣ್ಣಕಥೆ, ಕವನ, ನಗೇಹನಿ, ಪ್ರಬಂಧ ಇವುಗಳನ್ನು ಸದಾ ಸ್ವಾಗತಿಸುತ್ತದೆ. ಲೇಖನಗಳು ಫುಲ್‌ಸ್ಕೇಪ್ ಸೈಜಿನ 3 ಪುಟಗಳಿಗೆ ಮೀರದಂತಿದ್ದು, ಕಾಗದದ ಒಂದೇ ಮಗ್ಗುಲಲ್ಲಿ ಬರೆಯಲ್ಪಟ್ಟಿರಬೇಕು. ಅಸ್ವೀಕೃತ ಲೇಖನಗಳನ್ನು ಹಿಂದಿರುಗಿಸಲಾಗುವುದಿಲ್ಲ. ಸ್ವೀಕೃತ ಲೇಖನಗಳಿಗೆ ‘ಸಿದ್ಧಗಂಗಾ’ ಆಗಿಂದಾಗ್ಗೆ ನಿಗದಿಪಡಿಸಿಕೊಳ್ಳುವ ಸಂಭಾವನೆಯನ್ನು ನೀಡಲಾಗುವುದು. ಲೇಖನಗಳನ್ನು

“ಸಂಪಾದಕರು”
“ಸಿದ್ಧಗಂಗಾ” [ಕನ್ನಡ ಮಾಸ ಪತ್ರಿಕೆ]
ಶ್ರೀ ಸಿದ್ಧಗಂಗಾ ಕ್ಷೇತ್ರ-572131 ತುಮಕೂರು ಜಿಲ್ಲೆ.
ಇವರಿಗೆ ಕಳಿಸಿಕೊಡಬೇಕಾಗಿ ಪ್ರಾರ್ಥನೆ.

### ಚಂದಾದಾರರಲ್ಲಿ ವಿನಂತಿ

1979ನೆಯ ಹೊಸ ವರ್ಷದ ನಿಮ್ಮ ಚಂದಾ ನಂಬರ್ ಗುರುತಿಸಿಕೊಳ್ಳಿ. ಚಂದಾ ಅವಧಿ ಮುಗಿಯುವವರೆಗೆ ವಿಳಾಸ ಬದಲಾವಣೆ ಮತ್ತು ಇತರೆ ಬಗ್ಗೆ ವ್ಯವಹರಿಸುವಾಗ ನಿಮ್ಮ ವಿಳಾಸದ ಹಿಂಬದಿ ಇರುವ ಚಂದಾ ನಂಬರ್ ಅಥವಾ ಯಾರ ಮೂಲಕ ಸದಸ್ಯತ್ವ ಪಡೆದಿರುವಿರೋ ಆ ನಮ್ಮ ಪ್ರತಿನಿಧಿಗಳ ಹೆಸರನ್ನು ಸೂಚಿಸಿ ವ್ಯವಹರಿಸಿ.

ಚಂದಾ ಬಾಕಿ ಇರುವವರು ಸಂದಾಯ ಮಾಡಿ ‘ಸಿದ್ಧಗಂಗಾ’ ಮುನ್ನಡೆಗೆ ಸಹಕರಿಸಿ.

ಚಂದಾ ಅವಧಿ ಮುಗಿದಿರುವ ಮಾನ್ಯ ಓದುಗರು ಮುಂದಿನ ಸಾಲಿಗೆ ಮುಂದುವರಿಸಿಕೊಳ್ಳಬೇಕಾಗಿ ಪ್ರಾರ್ಥನೆ.

ಪ್ರಕಾಶಕರು
‘ಸಿದ್ಧಗಂಗಾ’ ಮಾಸ ಪತ್ರಿಕೆ, ಸಿದ್ಧಗಂಗಾ ಮಠ-572131 ತುಮಕೂರು ಜಿಲ್ಲೆ.

# ಸಂಪಾದಕೀಯ

ಮುರಾರ್ಜಿ ದೇಸಾಯಿಯವರ ಜನತಾ ಸರಕಾರ ಪತನಗೊಂಡು ಹತ್ತೂ ಹನ್ನೆರಡು ದಿನಗಳ ಅನಿಶ್ಚಿತ ಪರಿಸ್ಥಿತಿಯಲ್ಲಿ ತೊಳಲಾಡಿದ ರಾಷ್ಟ್ರನಾಯಕತ್ವ ಕೊನೆಗೊಮ್ಮೆ ಚೌಧುರಿ ಚರಣ್‌ಸಿಂಗರವರ ಪಾಲಿಗೆ ಬಂದಿತು. ತಾ ೨೮-೭-೭೯ ರಂದು ಪಾರ್ಲಿಮೆಂಟಿನ ಅಶೋಕ ಹಾಲಿನಲ್ಲಿ ನಡೆದ ವರ್ಣರಂಜಿತ ಸಮಾರಂಭದಲ್ಲಿ ಚರಣ್‌ಸಿಂಗರು ಭಾರತದ ಪ್ರಧಾನ ಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಿದರು. ಅವರ 15 ಜನ ಸಚಿವರ ಪಟ್ಟಿಯಲ್ಲಿ ಪ್ರಥಮ ಪ್ರಮಾಣ ವಚನ ಸ್ವಿಕರಿಸುವ ದಿನದಂದೇ ಆರು ಜನರ ಗೈರು ಹಾಜರಿಯೊಂದು ಅಶುಭ ಸೂಚನೆಯೇ ಆಗಿದ್ದಿತೆನ್ನದೆ ವಿಧಿಯಿಲ್ಲ. ಸಮ್ಮಿಶ್ರ ಸರಕಾರಗಳ ಲಕ್ಷಣವೇ ಹೀಗೇನೊ. ಆದೇನೆ ಇರಲಿ, ರಾಷ್ಟ್ರ ನಾಯಕತ್ವವನ್ನು ವಹಿಸಿರುವ ಚರಣಸಿಂಗರು ಹುಟ್ಟ ಖಂಡಿತ ವಾದಿಗಳು. ರೈತರ, ಹಳ್ಳಿಗಾಡಿನ ಜನರ ಉದ್ಧಾರದಲ್ಲಿ ಎಂದಿನಿಂದಲೂ ಆಸಕ್ತಿ ತೋರಿಸುತ್ತ ಬಂದಿರುವವರು. ರೈತರ ಉದ್ಧಾರದ ಬಗೆಗೆ ನೂರಾರು ಸಾವಿರಾರು ಯೋಜನೆ ಯೋಚನೆಗಳನ್ನು ತಲೆಯಲ್ಲಿ ತುಂಬಿಕೊಂಡುನಿಂತಿರುವವರು. ಇವರು ತಮ್ಮ ಆಡಳಿತದಲ್ಲಿ ಲಕ್ಷಾಂತರ ಹಳ್ಳಿಗಾಡುಗಳನ್ನು ಹೊಂದಿ ವಿವಿಧ ಸಮಸ್ಯೆಗಳನ್ನೆದುರಿಸುವ ಗ್ರಾಮೀಣ ಜನತೆಯ ಉದ್ಧಾರಕ್ಕೆ ಯಾವ ಮೂಲಸೂತ್ರಗಳನ್ನು ಕಂಡು ಹಿಡಿದು ಅವರ ಸರ್ವತೋಮುಖ ಅಭಿವೃದ್ಧಿಗೆ ಹೆಣಗುತ್ತಾರೆಂಬುದನ್ನು ಕಾದುನೋಡಬೇಕಾಗಿದೆ. ಸ್ವಾತಂತ್ರ್ಯ ಬಂದಾಗಿನಿಂದಲೂ ಗ್ರಾಮಾಂತರ ಪ್ರದೇಶಗಳ ಅಭಿವೃದ್ಧಿ, ರೈತರ ಉದ್ಧಾರವೆಂದು ಘೋಷಣೆಗಳನ್ನು ಕೂಗುತ್ತಲೇ ಬಂದಿರುವ ಭಾರತದ ನಾಯಕರು ಆ ದಿಸೆಯಲ್ಲಿ ರಾಷ್ಟ್ರದ ಸಮಗ್ರ ಗ್ರಾಮೀಣ ಅಭಿವೃದ್ಧಿಗೆ ಬೇಕಾಗುವ ಪರಿಪೂರ್ಣ ಯೋಜನಾ ಬದ್ಧವಾದ ಕಾರ್ಯವನ್ನು ಮಾಡಲಾಗಿಲ್ಲವೆಂಬುದಂತೂ ನಿಶ್ಚಯ, ಕಳೆದ ಐದಾರು ವರ್ಷಗಳಿಂದಂತೂ ಮಳೆಯ ನೀರನ್ನೇ ನಂಬಿ ವ್ಯವಸಾಯ ಜೀವನವನ್ನು ಸಾಗಿಸುತ್ತಿರುವ ರೈತಾಪಿ ಜನಗಳ ಕಷ್ಟ ನಷ್ಟಗಳು ಮುಗಿಲೆತ್ತರಕ್ಕೆ ಹೋಗಿವೆ. ಮನೆಮಂಡಳಿಯೆಲ್ಲ ದಿನವಿಡೀ ಕಷ್ಟಪಟ್ಟು ದುಡಿದರೂ ಎರಡು ಹೊತ್ತಿನ ಅನ್ನದಿಂದ ಮೈತುಂಬ ವಸ್ತ್ರ ಬಟ್ಟೆ ಬರೆಗಳಿಂದ ವಂಚಿತರಾಗಿದ್ದಾರೆಂಬ ಕಟು ಸತ್ಯವನ್ನು ಹೇಳದೆ ವಿಧಿಯಿಲ್ಲ. ಕಳೆದ ಐದಾರು ವರ್ಷಗಳಲ್ಲಿ ಯಂತ್ರೋತ್ಪಾದಕ ವಸ್ತುಗಳ ಬೆಲೆ ಗಗನಕ್ಕೇರಿದೆ. ಬುದ್ಧಿ ಜೀವಿಗಳು ಕಾರ್ಮಿಕರು ಮುಷ್ಕರದ ಮಹಾಸ್ತ್ರ ಪ್ರಯೋಗಮಾಡಿ ಅಷ್ಟು ಇಷ್ಟು ತಮ್ಮ ಸಂಬಳ ಸಾರಿಗೆಗಳನ್ನು ಉತ್ತಮ ಪಡಿಸಿಕೊಂಡು ತಮ್ಮ ತಮ್ಮ ಕಾರ್ಖಾನೆಗಳಿಂದ ಉತ್ಪತ್ತಿಗೊಳ್ಳುವ ವಸ್ತುಗಳ ಬೆಲೆ ಅಧಿಕಗೊಳ್ಳುವಂತೆ ಮಾಡಿದ್ದಾರೆ. ವ್ಯವಸಾಯಗಾರನ ಉತ್ಪಾದನೆಯ

ವಸ್ತುಗಳು ಈ ದೃಷ್ಟಿಯಿಂದ ತೀರಾ ಕನಿಷ್ಟಗೊಂಡು ಅವನ ಆರ್ಥಿಕ ಸಮತೋಲನ ತಪ್ಪಿ ಹೋಗಿ ಅವನು ದಿಕ್ಕು
ಗೆಟ್ಟಿದ್ದಾನೆ. ಅಂತಯೇ ವ್ಯವಸಾಯ ಜೀವನದಿಂದ ಸುಖವಿಲ್ಲವೆಂದು ನೌಕರಿ, ಇನ್ನಿತರ ಬೇರೆ ಬೇರೆ ಉದ್ಯೋಗ
ಗಳಿನ್ನರಸಿಕೊಂಡು ಪಟ್ಟಣಗಳತ್ತ ಧಾವಿಸಿ ಬರುತ್ತಿದ್ದಾನೆ. ಅಂತಯೇ ಪಟ್ಟಣಗಳ ಫ್ಯಾಕ್ಟರಿಯಲ್ಲೂ, ಆಫೀಸಿನಲ್ಲೂ
ಜವಾನನ ಕೆಲಸ ಸಿಕ್ಕರೂ ಸಾಕು ಸುಖವಾಗಿರಬಲ್ಲೆನೆಂಬುದು ಶ್ರೀಸಾಮಾನ್ಯ ರೈತನ ಹಂಬಲ. ಸ್ವತ: ವ್ಯವಸಾಯ
ಮಾಡುವ ವ್ಯವಸಾಯಗಾರನ ಇಚ್ಛೆಯೇ ಈಗಾದ ಮೇಲೆ ವ್ಯವಸಾಯದಲ್ಲಿ ಕೂಲಿ ಕುಂಬಳ ಮಾಡುತ್ತ ಜೀವಿಸು
ತ್ತಿದ್ದ ಇನ್ನಿತರ ಹಳ್ಳಿಗಾಡಿನ ಜನರ ಸ್ಥಿತಿಗತಿಯೇನು ? ಊಹೆಗೂ ನಿಲುಕದ ಬಡತನದ ಕೊಂಪೆಗಳಲ್ಲಿ ಶ್ರಮಜೀವಿಗ
ಳೆಲ್ಲ ಇಂದು ದಾರಿದ್ರ್ಯದ ಪರಮಾವಧಿಯಲ್ಲಿ ಒಂದಿಲ್ಲೊಂದು ರೋಗಗಳಿಗೆ ಬಲಿಯಾಗಿ ಸಾಯುತ್ತಿರುವುದನ್ನು
ನೋಡಬಹುದಾಗಿದೆ. ಒಂದು ಕಡೆ ಪಟ್ಟಣಗಳು ಯಾವ ಕಟ್ಟು ಪಾಡಿಲ್ಲದೆ ತ್ರೀವ್ರಗತಿಯಲ್ಲಿ ಬೆಳೆಯುತ್ತಿದ್ದರೆ, ಹಳ್ಳಿ
ಗಾಡುಗಳು ಬಿದ್ದ ಗೋಡೆಗಳನ್ನು ಕಟ್ಟಿಕೊಳ್ಳಲೂ ಶಕ್ತಿಯಿಲ್ಲದೆ ತೊಂದರೆಗೊಳಗಾಗಿ ಹಾಗೂ ಹೀಗೂ ತಮ್ಮ ಜೀವ
ನವನ್ನು ಮುಂದುವರಿಸಿಕೊಂಡು ನಮ್ಮ ಹಣೆಯಬರೆಹ, ಅದೃಷ್ಟ ಇತ್ಯಾದಿ ಮಾತುಗಳಿಂದ ಸಮಾಧಾನಗೊಂಡು
ಬರುತ್ತಿದ್ದಾರೆ ಅವರ ಆರ್ಥಿಕ ಸಮತೋಲನ ದಿಕ್ಕುಗೆಟ್ಟಿದೆ. ಈ ಎಲ್ಲ ಸಮಸ್ಯೆಗಳನ್ನು ಚರಣ ಸಿಂಗ್‌ರಂಥ
ಗ್ರಾಮೀಣ ರೈತರ ಉದ್ಧಾರದಲ್ಲಿ ಹಿಂದಿನಿಂದಲೂ ಆಸಕ್ತಿ ತಳೆದಿರುವವರು ಯಾವ ಯೋಜನೆಗಳನ್ನು ರೂಪಿಸುವರೊ
ಹೇಗೆ ಅವನ್ನು ಕಾರ್ಯ ರೂಪಕ್ಕೆ ತರುವರೇನೋ ನೋಡಬೇಕು. ರಾಷ್ಟ್ರವಿಂದು ಅನೇಕ ಸಮಸ್ಯೆಗಳ ಸಂಕೀರ್ಣ
ತೆಯಿಲ್ಲದೆ ಒಂದು ಯೋಜನೆ ಕಾರ್ಯರೂಪಕ್ಕೆ ಬರುವಷ್ಟರಲ್ಲಿ, ಇನ್ನೊಂದು ಸಮಸ್ಯೆ ತಲೆಯೆತ್ತಿ ನಿಲ್ಲುವಂತೆ ನಮ್ಮ
ಜನಗಳೇ ಸರಕಾರದೆದುರು ಭೂತಾಕಾರವಾಗಿಸಿಬಿಡುತ್ತಾರೆ. ಆದಾವುದಕ್ಕೂ ಚರಣಸಿಂಗರು ಹೆದರದೆ ಮುಖ್ಯವಾಗಿ
ಶ್ರಮಜೀವಿಗಳು ತಮ್ಮ ಶ್ರಮಕ್ಕೆ ತಕ್ಕ ಫಲವನ್ನು ಪಡೆಯುವಂತೆಯೂ, ರೈತರ ಜೀವನ ಉಲ್ಲಾಸಕರವಾಗಿ, ಆವೃತ್ತಿ
ಯೂ ಒಂದು ಗೌರವಾನ್ವಿತ ಪ್ರವೃತ್ತಿಯೆಂಬ ಮನೋಭಾವವನ್ನು ಅಂಕುರಿಸುವಂತಾಗಲು ಯಾವ ಯೋಜನೆಗಳನ್ನು
ರೂಪಿಸಬೇಕೋ ಆ ಯೋಜನೆಗಳನ್ನು ಕಾರ್ಯರೂಪಕ್ಕೆ ತಂದರೆ ಸೇಕಡ 70-80 ರಷ್ಟಿರುವ ಬಡ ರೈತರ ಬೆಂಬಲ
ಮುಂದೆಂದೂ ಅವರಿಗೆ ಸಿಕ್ಕೇಸಿಗುತ್ತೆಂಬುದರಲ್ಲಿ ಸಂಶಯವಿಲ್ಲ.

ಇದೇ ಆಗಸ್ಟ್-15 ರಂದು ಆಚರಿಸಲಿರುವ ರಾಷ್ಟ್ರೀಯ ಮಹಾ ಹಬ್ಬವಾದ ೩೩ ನೆಯ ಭಾರತ
ಸ್ವಾತಂತ್ರ್ಯೋತ್ಸವ ನಿಮಿತ್ತ "ಸಿದ್ಧಗಂಗಾ" ಪತ್ರಿಕೆಯು ಸಮಗ್ರ ಓದುಗರಿಗೆ ತನ್ನ ಶುಭಾಷಯಗಳನ್ನು ಸಲ್ಲಿಸುತ್ತದೆ.
ಭಾರತದ ಭಾವೈಕ್ಯ ಮಹಾ ಮಂತ್ರ ಸಾರ್ಥಕಗೊಳ್ಳಲೆಂದು ಹಾರೈಸುತ್ತದೆ. ಚರಣಸಿಂಗರ ನೂತನ ಸಮ್ಮಿಶ್ರ ಸರಕಾ
ರಕ್ಕೆ ಶುಭಾಶಯಗಳನ್ನು ಕೋರುತ್ತದೆ.

ಜೈ—ಹಿಂದ್

## ಸ್ವಾತಂತ್ರ್ಯ ಸೌರಭ

ಏಳೇಳು ಓ ಗೆಳೆಯ ಏಳೇಳಿ ಪ್ರಜೆವೃಂದ
ಏಳೇಳು ಸ್ವಾತಂತ್ರ್ಯ ಬಂಧು ಭಗಿನಿಯರೆ
ಭಾನು ಬೆಳಗುವ ಮುನ್ನ ಬಾಗಿಲೊಳು ಕಾಯುತಿಹ
ಸ್ವಾತಂತ್ರ್ಯ ಸೌರಭದ ಐಸಿರಿಯ ದಿನವು.

ವೈರಿಗಳ ಬಂಧಿಸಿದೆ ವೀರಯೋಧರ ಬಲವು
ನಾಡನ್ನು ಬಂಧಿಸಿದೆ ವಿದ್ಯೆ-ಸಂಸ್ಕೃತಿ ಕಲೆಯು
ನಾಡ ಸೇವೆಗೆ ಮಣಿದು ನಾವೆಲ್ಲ ಒಂದಾಗಿ
ಸ್ವಾತಂತ್ರ್ಯ ಬೆಳಸುವ ಸಂಭ್ರಮದ ದಿನವಿದು

ಸುಗ್ಗಿ ಸಗ್ಗದ ಒಲವು ವಿದ್ಯೆ ಅಭ್ಯಾಸದ ಒಲವು
ಹಬ್ಬ ಹಿಗ್ಗಿನ ಒಲವು ಸ್ವಾಗತ ಆದರದೊಲವು
ಮಾಲೆ ಹೂಗಳ ಒಲವು ನಾಡು ಪ್ರಜೆಗಳ ಒಲವು
ಒಲವು ಬಲವನು ಹೊತ್ತು ಭಾರತವ ಬೆಳಗಿಸುವ

ಸಾಗರವ ಬಂಧಿಸಿದೆ ರೂಢವಾಗಿಹ ನಾಕೆ
ಮಾಲೆಯನು ಬಂಧಿಸಿದೆ ಅರಳು ಬೆಡಗಿನ ಹೂವು
ಭೂಮಿಯನು ಬಂಧಿಸಿದೆ ಆಕರ್ಷ್ಯ ಆದಿತ್ಯ
ಭಾರತದ ಬಂಧಿಸಿದೆ ಸ್ವಾತಂತ್ರ್ಯ ಬಾವುಟ



# ನವನೀತ

(ಸಂಸ್ಕೃತ ಶ್ಲೋಕಗಳ ಭಾವಾನುವಾದ)

1] ನೃಶಂಸಮನೃಶಂಸಂ ವಾ ಪ್ರಜಾರಕ್ಷಣ ಕಾರಣಾತ್ ।
ಪಾತಕಂ ವಾ ಸದೋಷಂ ವಾ ಕರ್ತವ್ಯಂ ರಕ್ಷತಾ ಸತಾ ॥

ಪ್ರಜಾ ಪರಿಪಾಲನೆಗಾಗಿ ಮಾಡುವ ಯಾವ ಕೆಲಸವು ಕ್ರೂರವಾಗಿರಲಿ ಇಲ್ಲದಿರಲಿ, ಪಾಪಕ್ಕೆ ಕಾರಣವಾಗಿರಲಿ, ದೋಷದಿಂದ ಕೂಡಿರಲಿ, ಪ್ರಜಾ ರಕ್ಷಣೆಯ ಹೊಣೆ ಹೊತ್ತವನು ಅದನ್ನು ಮಾಡಲೇಬೇಕು,

★ ★

2] ಯಥಾ ದೃಷ್ಟಿ: ಶರೀರಸ್ಯ ನಿತ್ಯಮೇವ ಪ್ರವರ್ತತೇ ।
ತಥಾ ನರೇಂದ್ರೋ ರಾಷ್ಟ್ರಸ್ಯ ಪ್ರಭವಃ ಸತ್ಯಧರ್ಮಯೋಃ

ದೇಹಕ್ಕೆ ಕಣ್ಣಿರುವಂತೆ ರಾಜನು ರಾಷ್ಟ್ರದ ಕಣ್ಣಾಗಿ ಹಿತಾಹಿತಗಳನ್ನು ನೋಡಿಕೊಳ್ಳಬೇಕು. ಸತ್ಯ ಧರ್ಮಗಳಿಗೆ ಅವನು ಮೂಲ ಕಾರಣ.

★ ★

3] ಸಜೀವತಿ ಗುಣಾಯಸ್ಯ ಧರ್ಮೋ ಯಸ್ಯ ಸಜೀವತಿ ।
ಗುಣಧರ್ಮವಿಹೀನೋ ಯೋ ನಿಷ್ಫಲಂ ತಸ್ಯ ಜೀವಿತಂ ॥

ಯಾರಲ್ಲಿ ದಯಾ ದಾಕ್ಷಿಣ್ಯಾದಿ ಸದ್ಗುಣಗಳಿವೆಯೋ ಯಾರಲ್ಲಿ ಧರ್ಮ ಉಂಟೋ ಆತನು ನಿಜವಾಗಿಯೂ ಬದುಕಿದ್ದಾನೆ. ಗುಣ ಧರ್ಮಗಳಿಲ್ಲದವನ ಜೀವನ ನಿಷ್ಫಲ, ಅವನು ಜೀವಂತ ಶವ.

★ ★

# ಅಮೃತ ಬಿಂದು

ನಾವು 33 ನೇ ಸ್ವಾತಂತ್ರ್ಯವನ್ನು ಆಚರಿಸುತ್ತಿದ್ದೇವೆ. ಆದರ ಪೂರ್ಣವಾದ ಫಲವನ್ನು ಸಲಿಯುವುದರಲ್ಲಿ ಅಶಕ್ತರಾಗಿ ದೊರಕಿದ ಫಲವನ್ನು ಸವಿದು, ಈ ಅಲ್ಪ ತೃಪ್ತಿಯಲ್ಲಿ ಮತ್ತರಾಗಿ ತಮ್ಮ ಇರುವಿಕೆಯನ್ನೇ ಕುಡಿದ ಅಮಲಿನಲ್ಲಿ ಮರತಂತೆ ಕಾಣುತ್ತದೆ. ನಮ್ಮ ಮುಂದಿರುವ ಸಮಸ್ಯೆಗಳು ಬಲಿತು, ನಮ್ಮನ್ನೇ ನುಂಗುತ್ತಾ ನಿಂತಿವೆ. ಸಮಸ್ಯೆಗಳು ಅನಂತವಿರುವಾಗ ಸಮಸ್ಯೆಗಳಿಗೆ ಪೋಷಣೆ ಅತಿಯಾಗಿ ಸಮಸ್ಯೆಗಳ ಅತಿ ಸಂತಾನದ ಅತಿರೇಕವಾಗಿದೆ. ರಾಜಕೀಯ ಒಂದು ಚದುರಂಗದ ಆಟವಾಗಿ ನಮ್ಮ ದೇಶವು ರಾಜಕೀಯ ಸಮಸ್ಯೆಗಳ ಸುಳಿಯಲ್ಲಿ ಸಿಕ್ಕಿಕೊಂಡು ಮಿಲ ಮಿಲನೆ ಒದ್ದಾಡುತ್ತಿವೆ. ಸಮಸ್ಯೆಗಳು ಬಲಿತಿವೆ ಅವುಗಳೊಡನೆ ಹೋರಾಡುವ ಸಾಮರ್ಥ್ಯ ಬಲಿತಿಲ್ಲ ಇತ್ತೀಚಿನ ರಾಜಕೀಯ ಪರಿಸ್ಥಿತಿ ಒಂದು ಆಶಾದಾಯಕ ಸ್ಥಿತಿಗೆ ಕುಠಾರ ಪ್ರಾಯವಾಗಿ ಪರಿಣಮಿಸಿದೆ. ರಾಜಕೀಯ ಹುಚ್ಚು ಹೋಳಿ, ಸ್ವಾರ್ಥತೆ ಅಧಿಕಾರಲಾಲಸೆ ಸ್ವಪ್ರತಿಷ್ಠೆಗಳ ಸರಪಳಿಯು ಸುರುಸುರು ಬತ್ತಿಯಾಗಿದೆ. ಇದು ಪೂರ್ಣವಾಗಿ ನಂದಿ ಚಾತಕ ಪಕ್ಷಿಗಳಂತೆ ಬಾಯಿಬಿಡುತ್ತಿರುವ 60 ಕೋಟಿ ನಾಗರೀಕರಿಗೆ ಎಂದು ಪೂರ್ಣ ನೆಮ್ಮದಿ ಶಾಂತಿ ದೊರಕುವುದೆಂದು ಕಾದು ನೋಡಬೇಕಾಗಿದೆ. ಇದಾದಾಗ ನಮ್ಮ ಮನಸ್ಸಂತೋಷದ ಸ್ವಾತಂತ್ರ್ಯ ದಿನೋತ್ಸವ.

—ದುಂಬಿ

# ಈಶ ಪ್ರೇಮ

'Most of us are un conscious atheists Who self complacently think we are devout beli evers"

—Swami Vivekananda-

(ನಾವು ಹಾಗೆ ನೋಡಿದರೆ ನಾಸ್ತಿಕರು. ಸೋಗೇನೊ ಭಕ್ತಿಯದು)

ನಿಜವಾಗಿ ನಮಗೆ ಇಂದು ದೇವರು ಬೇಕಾಗಿಲ್ಲ. ಆ ಕಲ್ಪನೆ ಸ್ವೀಕರಿಸುವೆವು, ಹೆಸರಿಗೆ ಈಶ ಹಂಬಲ ಉದ್ದೇಶವೇನೊ ಸ್ವಾರ್ಥ ಪರ. ಬಸವಣ್ಣನವರು ಉಸಿರಿದಂತೆ, ಒಳಗೊಂದು ಹೊರಗೊಂದರ ಚೌಳಿಗೆ ನಾವು ಇನಿಸೂ ಹೊರತಾಗಿಲ್ಲ.

ನೈಜ ಪ್ರೇಮ ನಿಃಸ್ವಾರ್ಥವಾದುದು. ಅದು ಪೂಜೆ, ಪುನಸ್ಕಾರ ಅಲಂಕಾರದ ರಾಗದಾಟದು. ನಿಜವಾದ ಪ್ರೇಮದಲ್ಲಿ ಆಂತರಿಕ ಉತ್ಕಟ ಯೋಚನೆ ಇದೆ. !

ಮೀರಾಬಾಯಿ, ಅಕ್ಕ ಮಹಾ ದೇವಿಯಂತೆ ಅರಸುಗುವರನನ್ನು ಮದುವೆಯಾದಳು. ಅವನನ್ನು ವರಿಸುವ ಮೊದಲೆ ಪರಮಾತ್ಮನನ್ನು ವರಿಸಿದ್ದಳು. ಆಕೆಯ ಪತಿ ಕೇಳಿ ಅವಾಕ್ಕಾದ. 'ನಾನು ಐಸಿರಿಯನ್ನು ಬೇಡೆನು. ಸ್ಥಾನ ಮಾನದ ಆಸೆ ಇಲ್ಲ. ಮೋಕ್ಷ ನನ್ನ ಬಳಿ ಸಾರದಿರಲಿ, ಪ್ರಭು ನಿನ್ನ ಮೇಲಣ ಅವ್ಯಾಜ ವಾತ್ಸಲ್ಯಕ್ಕೆ ಹೊರತಾಗದಿದ್ದರೆ ಸಾಕು, ಇದೇ ಆಕೆಯ ಪ್ರಾರ್ಥನೆ, ಪ್ರಾಚೀನ ಪವಿತ್ರ ಕಾವ್ಯಗಳಲ್ಲಿ ಇಂತಹದೆ ವಿಚಾರ ಪ್ರಣಾಲಿ ಹುದುಗಿರುವದು.

ಅಂತಹ ಮೀರಾಬಾಯಿಯ ಮರಣಕಾಲ ಸನ್ನಿಹಿತ ಆಯಿತು. ನದೀ ತಟದಲ್ಲಿ ಸಮಾಧಿ ಏರಿದಳು. ಆಗ ಆಕೆ ಹಾಡಿದ ಮಂಗಳ ಗೀತೆಯಲ್ಲಿ ಆಕೆ ತಾನುತನ್ನ ಪ್ರಿಯಕರನನ್ನು ಕುರಿತು ನಡೆದಿರುವೆನೆಂದಳು,

ಮಾನವನಿಗೆ ತತ್ವಜ್ಞಾನದ ವ್ಯಾಮೋಹ ಅತಿ ಅವನು ಹುಟ್ಟು ಚಿಕಿತ್ಸಕ. ಧರ್ಮದ ಗುಟ್ಟನ್ನು ಬಯಲಿಗೆಳೆಯುವ ಅಖಂಡ ಸಾಹಸ ಅವನದು ಅದರ ವಿಶ್ಲೇಷಣ ಅವನ ಜೀವಿತದ ಧ್ಯೇಯ. ಆದರೆ ಮಹಿಳಾ ಮಣಿಯರ ಮಾತೇ ಬೇರೆ. ಅವರಿಗೆ ಭಕ್ತಿ, ವೈರಾಗ್ಯ ಮುಖ್ಯ. ಅವರದು ಪ್ರೇಮ ಹಾರ್ದಿಕ.

ಭಾರತದಲ್ಲಿ ಇಷ್ಟಾದರೂ ಪ್ರೇಮದ ಸ್ವರೂಪ ವಿಭಿನ್ನವಾಗಿದೆ. ಅದರ ಸ್ವರೂಪ ಆಧ್ಯಾತ್ಮಿಕ. ಆದರೆ ಪಾಶ್ಚಿಮಾತ್ಯ ದೇಶಗಳಲ್ಲಿ ಸಂಪತ್ತೇ ಪ್ರಮುಖವಾಗಿದೆ. ಹೆಜ್ಜೆ ಹೆಜ್ಜೆಗೆ ಅದರ ಪೂಜೆ ನಡೆದಿರುವುದು. ದೇವರಿಗಿಂತ ಡಾಲರ್ ಅವರಿಗೆ ಮಮತೆಯದು. ಅದನ್ನೆ ಮನ ಮುಟ್ಟಿ ಅರಾಧಿಸಿ ಕೃತಾರ್ಥರಾಗುತ್ತಿರುವುದು.

ಒಬ್ಬ ಭಿಕ್ಷುಕನ ಕತೆ ಈ ದಿಸೆಯಲ್ಲಿ ಮಾರ್ಮಿಕ ಇರುವುದು. ಅವನು ಒಬ್ಬ ಚಕ್ರವರ್ತಿಯ ಬಳಿಗೆ ದಾನ ಬೇಡಲು ಹೋಗಿದ್ದ. ಅವನೊ ದೇವರ ಪ್ರಾರ್ಥನೆಯಲ್ಲಿ ನಿರತನಾಗಿದ್ದ.- ದೇವರೆ ನನಗೆ ಸಂಪತ್ತನ್ನು ದಯಪಾಲಿಸು. ಅಧಿಕ ಪದವಿ ಶಕ್ತಿಯನ್ನು ಕೊಡು. ನನ್ನ ರಾಜ್ಯ ವಿಸ್ತಾರವಾಗಲಿ,

ಇದನ್ನು ಕೇಳಿ ಭಿಕ್ಷುಕನು ಅಲ್ಲಿಂದ ಕಾಲ್ದೆಗೆದ. ದೊರೆ ಅಷ್ಟಕ್ಕೆ ಪಾರ್ಥನೆ ನಿಲ್ಲಿಸಿ ನುಡಿದ— ಅಯ್ಯಾ, ಭಿಕ್ಷೆ ಒಯ್ಯದೆ ನಡೆದೆಯಲ್ಲ. !

ಭಿಕ್ಷುಕ ಉತ್ತರಿಸಿದ— "ಭಿಕ್ಷುಕನಿಂದ ನಾನು ಭಿಕ್ಷೆ ಸ್ವೀಕರಿಸಲಾರೆ"

ಸಜ್ಜನರು ಪರಹಿತ ನಿರತರು. ಹೆರವರ ಕಲ್ಯಾಣಕ್ಕಾಗಿ ಹಗಲಿರುಳು ಚಿಂತಿಸುವರು. ಅವರಿಗೆ ಸ್ವಾರ್ಥ ಕಾಣದು. ಅವರ ಹೃದಯ ಆವರಿಸಿದುದು ಲೋಕ ಕಲ್ಯಾಣ ಬುದ್ಧಿ.

ಇಂದು ಧರ್ಮ ಉದ್ಯೋಗವಾಗಿದೆ ಸೋಗು ವಿಲಾಸ ಎನಿಸಿದೆ. ಜನರು ಕುರಿಗಳಂತೆ ದೇವ ಮಂದಿರ ನುಗ್ಗುವರು. ಅವರು ಬೇಕೆಂದು ನಾಸ್ತಿಕರು ಸೋಗು ದೈವ ಭಕ್ತಿ !

ಇಂತಹರನ್ನು ಕಂಡೇ ಶರಣರು ನಕ್ಕದ್ದು. ತಿದ್ದಲು ಹೆಣಗಿದ್ದು !

[ಆಧರಿಸಿದುದು]



# ಮಹಾರಹಸ್ಯ

## ಧಾರ್ಮಿಕ-ವೈಜ್ಞಾನಿಕ ವಿವೇಚನೆ :

—ಪಂಡಿತ ಡಿ. ರೇವಣ್ಣಪ್ಪ

ಜಗತ್ತಿನ ಸೃಷ್ಟಿ ವಿಚಿತ್ರವಾದುದು. ಅನ್ವೇಷಣಮಾಡುತ್ತಾ ಹೊಸ ಹೊಸ ಆಶ್ಚರ್ಯಗಳು ತಿಳಿದು ಬರುತ್ತವೆ. ಕೇವಲ ಬಿಂದುಮಾತ್ರದಿಂದ ಈ ಮಾನವ ಹುಟ್ಟಿಬೆಳೆಯುತ್ತಾನೆ. ಅವನಲ್ಲಿ ಮಾನಸಿಕ ಮತ್ತು ಬೌದ್ಧಿಕ ವಿಕಾಸಗಳು ಬೆಳೆಯುತ್ತವೆ. ಭಾವನೆಗಳು ಬೆಳೆದಂತೆ, ಬಯಕೆಗಳು ಬಲವಾದಂತೆ ತಾನೂ ಸೃಷ್ಟಿ ಮಾಡಲು ಪ್ರಯತ್ನ ಮಾಡುತ್ತಾನೆ. ಹೀಗೆ ಒಂದೇ ರೀತಿಯಲ್ಲಿ ಉತ್ಪನ್ನವಾಗಿದ್ದರೂಸಹ ಭಿನ್ನತೆಯಿರುವುದು ನಿಜವಾಗಿಯೂ ಕುತೂಹಲ ಜನಕವಾಗಿದೆ! ಕೆಲವರು ಪುಣ್ಯಶೀಲರಾದರೆ. ಮತ್ತೆ ಕೆಲವರು ಪಾಪದನೆಲೆಯಾದವರು. ಕೆಲವರು ಸದಾಚಾರಿಗಳಾದರೆ, ಕೆಲವರು ದುರಾಚಾರಿಗಳು. ಕೆಲವರು ಶಕ್ತರಾದರೆ ಮತ್ತೆಕೆಲವರು ಅಶಕ್ತರು. ಕೆಲವರು ಇಹಲೋಕ ಸುಖಾಸಕ್ತರಾದರೆ, ಇನ್ನೂ ಕೆಲವರು ಪರಲೋಕಚಿಂತಕರು. ಇಷ್ಟೆಲ್ಲಾಭಿನ್ನತೆಗೆಕಾರಣ ವೇನು ? ವಿಚಾರಮಾಡಿನೋಡಿದರೆ, ಯಾರೋ ಒಬ್ಬ ಶಾಸಕನ ನಿಯಮಕ್ಕನುಸಾರವಾಗಿ ಎಲ್ಲಾನಡೆಯುತ್ತಿದೆಯೆಂದು ತಿಳಿಯುತ್ತದೆ. ಮನುಷ್ಯ ಹುಟ್ಟುತ್ತಾನೆ, ಬೆಳೆಯುತ್ತಾನೆ, ಸಾಯುತ್ತಾನೆ, ಆದರೆ ಅದೇ ಅವನ ಅಂತ್ಯವಲ್ಲ! ಸೃಷ್ಟಿಯಕಾರ್ಯದಲ್ಲಿ ನಿರಂತರಹೋರಾಟ ತತ್ಪರನಾಗಿ, ಎಲ್ಲಾವಿಚಾರದಲ್ಲೂ 'ವಿಕಾಸವಾದ' ಮಾರ್ಗ ಕಂಡುಕೊಳ್ಳುವುದೇ ಮಾನವ ಹೋರಾಟದ ಕ್ರಿಯಾಶೀಲ ಕರ್ಮವಾಗಿರುತ್ತದೆ.

**ಹೋರಾಟ :** ಬದುಕಿನ ಪುಟಗಳಲ್ಲೆಲ್ಲಾ ಪ್ರಶ್ನಾರ್ಥಕ ಚಿಹ್ನೆಗಳನ್ನೇ ಮುದ್ರಿಸಿರುವ ಒಂದು ಆಕರ್ಷಕಪುಸ್ತಕಕ್ಕೆ ಮಾನವ ಜೀವನವನ್ನು ಹೋಲಿಸಬಹುದೆಂದು ತೋರುತ್ತದೆ. "ಪುಸ್ತಕದಹೊರಕಟ್ಟು ಸುಂದರ. ಒಳಗೆ ಕಣ್ಣಿರಿಸಿದರೆ ಬರಿಯಪ್ರಶ್ನಾರ್ಥಕಚಿಹ್ನೆಗಳು ಕಾಣುತ್ತಿವೆ". ಆದರೆ ಆ ಪ್ರಶ್ನೆ ಚಿಹ್ನೆಗಳ ಸಾಂಕೇತಿಕ ಅರ್ಥವನ್ನು ತಿಳಿಸಿಕೊಡುವ ಮಾರ್ಗದರ್ಶಕರೂ, ಜೀವನದಲ್ಲಿ ಆಗಾಗದೊರೆಯುತ್ತಾರೆ. ಅನುಭಾವಿಗಳೇ ಈ ಗುಂಪಿಗೆ ಸೇರಿದವರಾಗಿದ್ದಾರೆ. ಜೀವನದಸಫಲತೆಗಾಗಿ ಮಾನವ ಹೋರಾಟಮಾಡುತ್ತಾನೆ. ಐಹಿಕ ಜೀವನದ ಯಶಸ್ಸು, ಅನುಕೂಲತೆಗಳು ಮಾನವನಿಗೆ ತೃಪ್ತಿ ಹಾಗೂ ಶಾಂತಿಯನ್ನು ತರುವುವೆಂದು ಹೇಳಲುಬರುವಂತಿಲ್ಲ. ಕೆಲವು ಶ್ರೇಷ್ಠ ಗುಣ ಕರ್ಮಗಳಿಂದ ಕೀರ್ತಿಗಳಿಸಿದರೂ, ಜೀವನದಲ್ಲಿ ನೋವಿನ ಅನುಭವದ ಹಿತದೂರವಾಗಿರುವುದಿಲ್ಲ. ನಮ್ಮ ಸುತ್ತಲಿನಜಗತ್ತಿನಲ್ಲಿ ಇಂತಹ ಎಷ್ಟೋ ಉದಾಹರಣೆಗಳು ದಿನವೂ ಕಣ್ಣಿಗೆ ಬೀಳುತ್ತಿವೆ. ಈ ಮಾತು ಪುರಾಣ ಪ್ರಸಿದ್ಧ ವ್ಯಕ್ತಿಗಳಲ್ಲೂ ಅನ್ವಯಿಸುತ್ತದೆ. ಕನ್ನಡದ ಆದಿಕವಿ ಪಂಪನ, ಪಂಪಭಾರತದಲ್ಲಿನ

"ಛಲದೊಳ್ ದುರ್ಯೋಧನಂ ನನ್ನಿಯೊಳಿನತನಯಂ ಗಂಡಿನೋಳ್ ಭೀಮಸೇನಂ ।
ಬಲದೊಳ್ ಮದ್ರೇಶಂ ಅತ್ಯುನ್ನತಿಯೊಳ್ ಅಮರಸಿಂಧೂದ್ಭವಂ ಚಾಪವಿದ್ಯಾ ॥
ಬಲದೊಳ್ ಕುಂಬೋದ್ಭವಂ ಸಾಹಸದಮಹಿಮೆಯೊಳ್ ಫಲ್ಗುಣಂ ಧರ್ಮದೊಳ್ ನಿ ।
ರ್ಮಲಚಿತ್ತಂ ಧರ್ಮಪುತ್ರಂ ಮಿಗಿಲ್ ಇವರ್ಗಳಿಂ ಈ ಭಾರತಂ ಲೋಕಪೂಜ್ಯಂ ॥"

ಎಂಬ ಪದ್ಯದಲ್ಲಿ ಎಂಟುಜನ ಮಹಾವ್ಯಕ್ತಿಗಳನ್ನು

ಉಲ್ಲೇಖಿಸಿ ಮಹಾಭಾರತವು ಲೋಕಪೂಜ್ಯವೆಂದು ಹೇಳುತ್ತಾನೆ. ದುರ್ಯೋಧನನ ಛಲ, ಕರ್ಣನ ಸತ್ಯ, ಭೀಮನಕೆಚ್ಚು, ಮದ್ರದೊರೆಯಬಲ, ಭೀಷ್ಮನ ಉನ್ನತಿ ದ್ರೋಣರ ಚಾಪವಿದ್ಯೆ, ಅರ್ಜುನನ ಸಾಹಸ ಧರ್ಮರಾಯನ ಧರ್ಮನಿಷ್ಠೆ, ಈಗುಣಗಳಿಂದವರೆಲ್ಲರೂ ಲೋಕಪೂಜ್ಯರಾಗಿದ್ದಾರೆ. ಆದರೆ ಒಬ್ಬೊಬ್ಬರೂ ಜೀವನದಲ್ಲಿ ದ್ವಂದ್ವವನ್ನೆದುರಿಸಲೇಬೇಕಾಯಿತು. ಒಂದಿಲ್ಲೊಂದು ದುಃಖ ಮತ್ತು ನಿರಾಶೆಗೆ ಅವರು ಒಳಗಾಗಲೇ ಬೇಕಾಯಿತು. ಆ ಮಹಾನುಭಾವರಿಗೂ ಜೀವನದಲ್ಲಿ ಅತೃಪ್ತಿ ತಪ್ಪಿಲ್ಲವೆಂದು ಸ್ಪಷ್ಟವಿದೆ.

ಐಹಿಕಜೀವನದ ಜಯವು ನಿರರ್ಥಕವೆಂಬ ಅನುಭವವು ಒಮ್ಮಲ್ಲೊಮ್ಮೆ ಬಂದೇಬರುತ್ತದೆ. ಸಂಪತ್ತು, ಕೀರ್ತಿಗಳೂ ಕ್ಷಣಿಕವೆಂದು ತೋರುತ್ತದೆ. ಚಿರಂತನ ಶಾಂತಿ-ಸುಖಗಳನ್ನು ಅರಸುವ ಮಾನವನಿಗೆ, ಜೀವನದ ಕೀರ್ತಿ ಹಾಗೂ ಸಂಪತ್ತುಗಳು ಪ್ರಯೋಜನವೆಂದೆನಿಸಲಾರವು. ''ನಾನಾಚಿಂತೆಯುಳಿದು ಮನವು ಆತ್ಮಸಂಧಾನದೊಳು ತೊಡಗೆ ಮಾನವ ಜೀವನದ್ವಂದ್ವಗಳನ್ನು ದಾಟಬಲ್ಲ.'' ಜೀವನದಲ್ಲಿ ಸುಖ-ದುಃಖ, ಮೇಲು-ಕೀಳು, ಉತ್ತಮ-ಕನಿಷ್ಠ, ಹರ-ನರ, ಹುಟ್ಟು-ಸಾವು, ಅರಿವು-ಅಹಂಕಾರ, ಪಾಪ-ಪುಣ್ಯ, ಧರ್ಮ-ಅಧರ್ಮ, ಆಚಾರ-ಅನಾಚಾರ, ಸತ್ಯ-ಸುಳ್ಳು, ಕರುಣೆ-ಕಾಠಿಣ್ಯ ಹೀಗೆ ದ್ವಂದ್ವಗಳ ಮಾಲೆಯೇ ಮಾನವ ಜೀವನದ ಪ್ರಶ್ನೆಯು ಹುತ್ತವಾಗಿ ಬೆಳೆಯುತ್ತವೆ. ಆಪ್ರಶ್ನೆಗಳಿಗೆ ಉತ್ತರವಾಗಿ ಬರುವ ಅರಿವೇ ಆತ್ಮನಗುರಿಯು, ಆನಂದದನೆಲೆಯೂ ಆಗಿದೆ.

## ಗೆಲುವು-ನಲಿವು

ಮಾನವನ ಬದುಕು ಭವ್ಯ-ಭದ್ರ ಮಾತ್ರವಲ್ಲದೆ, ಭಗವಂತನಲ್ಲೂ ಒಲವಿನ ಗೆಲುವು ಪಡೆಯಬೇಕು ಹೋರಾಟ ಪ್ರಗತಿಯತಳಪಾಯ. ಪ್ರಗತಿ ಗೆಲವು-ನಲಿವುಗಳನೆಲೆ. ಗೆಲವು ಕೈಸೇರಿದಾಗಲೂ ನಲಿವುನುಸುಳಿಕೊಂಡು ಹೋಗುತ್ತದೆ. ಪ್ರಗತಿಯನ್ನುಸಾಧಿಸಿದಾಗಲೂ ಪರಿಪೂರ್ಣತೆ ಕೈಗೂಡುವುದಿಲ್ಲ. ಸುಧಾರಣೆಯಹಂಬಲದಲ್ಲೂ ನಿರಾಶೆಗೆ ಎಡೆದೊರೆಯುತ್ತಿದೆ. ಹೋರಾಟದಿಂದಾಗಿ ಶಕ್ತಿ-ಶ್ರಮಗಳು ಸಾರ್ಥಕತೆಯತ್ತ ಸಾಗದಿರಬಹುದು. ಜೀವನಜಲ್ಲಿನ ಎತ್ತರದಸ್ಥಾನ, ಮತ್ಸರವನ್ನು ಬೆಳೆಸುತ್ತದೆ. ಕೀರ್ತಿಯಬೆಳಕಲ್ಲೂ ಅತೃಪ್ತಿಗೆ ಅವಕಾಶವಿದೆ, ಮಾತಿನ ಚಮತ್ಕಾರದಲ್ಲಿ ಮೌನದಶಾಂತಿಮಾಯವಾಗುತ್ತದೆ. ವಿಭಜನೆಯಜ್ವಾಲೆ ಸಂಯೋಜನೆಯನ್ನು ಹಾಳು ಮಾಡುತ್ತಿದೆ. ಧರ್ಮದ ಹೆಸರಿನಲ್ಲಿ ಅಧರ್ಮ ಬೆಳೆಯುತ್ತಿವೆ. ವಿದ್ಯೆಯ ಒಲವು ಮದವನ್ನು ತರುತ್ತಿದೆ. ಪರೋಪಕಾರದ ದೃಷ್ಟಿಯು ಪೀಡನೆಯ ಅಹಂಕಾರದ ನೆಲೆಯಾಗುತ್ತಿದೆ. ಪ್ರಾಮಾಣಿಕತೆಯ ಮಾಧುರ್ಯ ಅಪ್ರಮಾಣಿಕತೆಗೆ ಹವಣುಹಾಕುತ್ತಿದೆ. ನಿಷ್ಠುರೋಕ್ತಿನಿಂದೆ ಹಾಗೂ ವಿರಸಗಳಿಗೆ ನೆಲೆಯಾಗುತ್ತಿವೆ. ಜನಪ್ರಿಯತೆಯು ಪೀಡನೆಯ ಅಡ್ಡಾಹಾದಿಗೆಳೆಯುತ್ತಿದೆ. ಆತ್ಮಸಾಧನೆಯು ಐಹಿಕಜೀವನದಿಂದ ಪಲಾಯನ ಬಯಸುತ್ತಿದೆ. ಈ ದ್ವಂದ್ವಗಳು ಏಕೆ ? ಅವುಗಳನ್ನು ದಾಟುವುದು ಹೇಗೆ? ಜೀವನದಲ್ಲಿ ವಿಷಮತೆ, ನೋವು, ಕೆಡುಕುಗಳೇಕಿರಬೇಕು ? ನ್ಯಾಯವೆಂದು ಮನಗಂಡದ್ದು ಅಪಜಯಕ್ಕೇಕೆಪಕ್ಕಾಗಬೇಕು ? ನಮ್ಮಜಯವು ನಿರಾಶೆಗೇಕೆ ಕಾರಣವಾಗಬೇಕು ? ಪುಣ್ಯದಬಯಕೆ ಪಾಪದ ಬೆಳೆಯಾಗುತ್ತಿರುವುದು ಏಕೆ ? ಧರ್ಮದದಾರಿ ದಯಾಶೂನ್ಯವಾಗಿರುವುದಾದರೂ ಏಕೆ ? ಇತ್ಯಾದಿ ಪ್ರಶ್ನೆಗಳಿಂದ ಈ ಮಾನವ ಜೀವನವೆಂಬುವ ಪುಸ್ತಕದ ಪುಟಗಳು ತುಂಬಿದಂತಿವೆ.

ಇಂತಹ ಪ್ರಶ್ನೆಗಳಿಗೆ ಉತ್ತರಗಳೂ ಆಗಾಗದೊರೆತ್ತಿವೆ. 'ಭರತೇಶವೈಭವ, ಕಾವ್ಯದಲ್ಲಿ ದೊರೆಯುವ ಉತ್ತರವು ಇಂತಿದೆ. –"ಹೊಳೆವ ಕನ್ನಡಿ ಕೈಯೊಳಗಿದ್ದು ನೋಡದೆ, ನೀರನೆಳಲಲ್ಲಿ ಮೊಗವನೋಳ್ಪಂತೆ, ಒಳಗಿದ್ದ ಚಿದ್ರೂಪನೋಡನೆ ಜಗವೆಲ್ಲ ಬಳಲುತಿಹುದು ಹೊರಗಾಡಿ." - ಜಗವುಬಳಲುತ್ತಿರುವುದಕ್ಕೆ, "ಹೊರಗೆ ಆಡುತ್ತಿರುವುದೇ" ಕಾರಣವೆಂದು ರತ್ನಾಕರನು ಹೇಳುತ್ತಾನೆ. ಭರತೇಶನು ಹೊರಗೆ ಆಡುತ್ತಿರುವಾಗಲೇ ಒಳಗಿನ ಚಿದ್ರೂಪಕ್ಕಾಗಿ ಧ್ಯಾನಾಸಕ್ತನಾಗಿದ್ದು ಹೊರಗಿನ ಆಟವನ್ನು ನಿಲ್ಲಿಸಬೇಕೆಂದೂ ಭರತೇಶ ತಿಳಿದುಕೊಂಡಿರಲಿಲ್ಲ. 'ಆತ್ಮನನಲಿವು ಜೀವನದಗೆಲವು, ಎಂಬುದೇ ಅವನ ಬಯಕೆಯಾಗಿದ್ದಿತು. ಹೊರಗಿನ ಗೆಲುವಿನಲ್ಲಿ ಯಾರಿಗೂ ನೆಮ್ಮದಿ ಹಾಗೂತೃಪ್ತಿಗಳು ದೊರೆಯಲಾರವು. ಈ "ಮಹಾರಹಸ್ಯ" ಮಾನವೀಯ ಮಹಾ ಸಾಧನೆಯೂ ಆಗಿದೆ.



ಐಹಿಕ ಜೀವನದ ಯಶಸ್ಸು ಎಲ್ಲಿನವರೆಗೆ ನೆರವಾಗಿ ನಿಲ್ಲುವುದೆಂಬ ವಿಚಾರ, ಲೌಕಿಕ ಜಯವಂತರ ಪಾಡೇನೆಂಬುದರ ವಿವೇಚನೇ ಇವೆಲ್ಲವನ್ನು ಮೀರಿನಿಂತ 'ಮಹಾರಹಸ್ಯ'ವನ್ನು ಮಾನವನಿಂದು ಮನಗಾಣಲೇಬೇಕಾಗಿರುತ್ತದೆ. ವಿಶ್ವದ ಶಾಂತಿ ಮತ್ತು ಸುಖದ ಸಾಧನೆಯ ನೆಲೆಗಾಗಿ. ಮಾನವ ಸಮಾಜ ಜೀವಿ. ಸಾಮಾಜಿಕಗೊತ್ತು ಗುರಿಗಳ ಅರಿವು, ಅನುಭವ, ಅಂತಸ್ತು ಅಂತರಂಗಳನ್ನು ಮನಗಾಣುವುದೇ ಸಮಾಜದ ಪ್ರತಿವ್ಯಕ್ತಿಯ ಕ್ರಿಯಾಶೀಲ ಸಾಧನೆಯ ಧರ್ಮವಾಗಿರುತ್ತದೆ. ಹೀಗೆ ಆರುಜನ ಸುಪ್ರಸಿದ್ಧವ್ಯಕ್ತಿಗಳು ವಿಶ್ವ ಪರಿಷತ್ತಿಗೆಂದು ಹೊರಟಿದ್ದಾರೆ. ಸಾಗರದ ಮಧ್ಯದಲ್ಲಿ ಹಡಗು ಅಪಘಾತಕ್ಕೀಡಾಗುತ್ತದೆ. ಈ ಆರು ಜನವ್ಯಕ್ತಿಗಳು ತಮ್ಮಕೊನೆಯಗಳಿಗೆಯನ್ನು ನಿರೀಕ್ಷಿಸುತ್ತ ಪ್ರಾಣರಕ್ಷಕನಾಕೆಯಲ್ಲಿದ್ದಾರೆ. ಅಲ್ಲಿಯೇ ಏಳನೆಯ ಅಜ್ಞಾತ ವ್ಯಕ್ತಿಯೂಬ್ಬನಿದ್ದಾನೆ.

ಜೀವನದಲ್ಲಿ ವಿವಿಧ ರಂಗಗಳಲ್ಲಿ ಯಶಸ್ಸಿನ ತುತ್ತತುದಿಯನ್ನು ಮುಟ್ಟಿದ, ಆರೂಜನರ್ಾ ಅಸಫಲತೆಯನ್ನು ಪ್ರಾಮಾಣಿಕವಾಗಿ ವರ್ಣಿಸುತ್ತಾರೆ. ನೀರು ಆಹಾರಗಳ ಸಂಗ್ರಹ ತೀರಿ ಮರಣವನ್ನೆದುರಿಸಬೇಕಾದ ಸನ್ನಿವೇಶದ ಈ ಆತ್ಮ ನಿವೇದನೆಯಲ್ಲಿ ಲೌಕಿಕ ಜಯವಂತರ ಸೋಲನ್ನು ಬಣ್ಣಿಸಲಾಗಿದೆ. ಅಲ್ಲಿ ಅಸಹಾಯದ ಧ್ವನಿಯೂ ಇದೆ. ಏಳನೆಯ ಅಜ್ಞಾತ ವ್ಯಕ್ತಿ ಮಾತ್ರ ಅಸಹಾಯಸ್ಥಿತಿಯನ್ನು ಒಪ್ಪಿಕೊಳ್ಳುವುದಿಲ್ಲ. ಅವನು ಪ್ರಾರ್ಥನೆಯ ಬಲದಿಂದ, ಶ್ರದ್ಧೆಯ ಸಾಧನೆಯಿಂದ ಕಡೆಗೆ ರಕ್ಷಣೆಯೊದಗುವುದೆಂದು ಹೋಗುತ್ತಾನೆ. ಜೀವನದ ಹೊಸ ಬೆಳಕನ್ನು ಆರು ಜನರಿಗೂತೋರಿಸುತ್ತಾನೆ, ಮಾನವ ಜೀವನದ 'ಮಹಾರಹಸ್ಯ' ಸಂದೇಶವನ್ನು ಬಿತ್ತರಿಸುಸುತ್ತಾನೆ ಅರಿವಲ್ಲರಶ್ರದ್ಧೆಯಪ್ರಾರ್ಥನೆಯು ಸಫಲವಾಗಿ ನೆರವುದೊರೆತು ಜೀವರಕ್ಷಣೆಯಾಗುತ್ತದೆ. ಹೊಸಬೆಳಕಿನ ಮಹಾರಹಸ್ಯವನ್ನರಿತು, ಹೊಸಬಾಳ್ವಲು ನಿರ್ದರಿಸುತ್ತಾರೆ.

ಹೊಸಬಾಳನ್ನು ಕಂಡ ವ್ಯಕ್ತಿಗಳು 1) ರಾಜನೀತಿಜ್ಞ 2) ಲೇಖಕ, 3) ವಿಜ್ಞಾನಿ 4) ಕಲಾವಿದ, 5) ಉದ್ಯಮಪಟು. 6) ವ್ಯಾಯಾಮಸಾಧಕರು. ಈ ಆರು ವ್ಯಕ್ತಿಗಳೂ ತಮ್ಮ ತಮ್ಮ ಕ್ಷೇತ್ರಗಳಲ್ಲಿ ಅದ್ಭುತ ಯಶಸ್ಸುಗಳಿಸಿದವರು. ಅವರಾರಿಗೂ ಸಂತೃಪ್ತಿ ದೊರೆಯಲಿಲ್ಲವೆಂಬದನ್ನು ಅವರೇ ಒಪ್ಪಿಕೊಳ್ಳುತ್ತಾರೆ. ಮನುಷ್ಯನಿಗೆ ಸಾಧ್ಯವಿದ್ದುದನ್ನೆಲ್ಲಾ ಅವರು ಸಾಧಿಸಿದರು. ಯಶದ ಶಿಕರಕ್ಕೇರಿದರು, ಆ ಶಿಖರವನ್ನೇರಿದಾಡ ಒಂದು ಅಗಾದ ರೂಪವನ್ನು ಕಂಡು ಅವರ ಕೈ ಸೋತವು. ಅಜ್ಞಾತ ವ್ಯಕ್ತಿಯಾದವನು ಅವರ ಸಮಸೆಯ್ಯನ್ನು ನಿವಾರಿಸುವ ತೀರ್ಮಾನವನ್ನು ಒದಗಿಸಿದನು. ಜೀವನದ ಒಗಟಿಗೆ ಪರಿಹಾರವನ್ನು ಸೂಚಿಸಿದೆ.

ಆ ಆರು ವ್ಯಕ್ತಿಗಳ ಪರಿಚಯವನ್ನು ಅವರವರ ಅತೃಪ್ತಿಯನ್ನು ಅವಲೋಕಿಸೋಣ.

೧) ರಾಜನೀತಿಜ್ಞ

ಬಾಲ್ಯದಿಂದ ಅನುಕೂಲ ಸನ್ನಿವೇಶಗಳಲ್ಲಿದ್ದ ಬೆಳೆದವನು. ಒಂದು ರಾಷ್ಟ್ರದ ಪ್ರಧಾನ ಮಂತ್ರಿಯಾದವನಾತ. ಜಗತ್ತಿನ ಪ್ರತಿಯೊಂದು ಸಮಸ್ಯೆಗೂ ಪರಿಹಾರವನ್ನೊದಗಿಸುವ ಉತ್ಸಾಹದಲ್ಲಿದ್ದ. ಆದರೆ ವಾಸ್ತವಿಕ ರಂಗದಲ್ಲಿ ಆ ಉತ್ಸಾಹವು ಮಣ್ಣು ಗೂಡಿತು. ವಿಚಾರಗಳನ್ನು ಆಚಾರ ತಿಳಿಸುವಾಗಿನ ತೊಡಕುಗಳಿಂದಾಗಿ ತನ್ನ ಮಹಾಧ್ಯೇಯವನ್ನು ಸಾಧಿಸಲು ಆತನು ಅಸಮರ್ಥನಾದ, ಆತನ ಹೃದ್ಗತವಿಂತಿದೆ,

"ಯಶಸ್ಸು ವ್ಯಕ್ತಿಯ ಯೋಗ್ಯತೆಯ ಮಾನದಂಡವಲ್ಲ. ಸನ್ನಿವೇಶಕ್ಕೆ ಹೊಂದಿಕೊಂಡು ಹೋಗುವ ಹಾಗೂ ಇತರರನ್ನು ಸಂತೋಷ ಪಡಿಸುವ ಸಾಮರ್ಥ್ಯ ಪ್ರತೀಕವು ಅದೆಂದು ನಾನು ಕಂಡು ಹಿಡಿದೆನು. ಅದಕ್ಕಾಗಿ ಜನರ ಕುಂದು ಕೊರತೆಗಳನ್ನು ತಿದ್ದುವುದಕ್ಕಿಂತ ಅವರ ದೌರ್ಬಲ್ಯಗಳನ್ನು ದೊಡ್ಡ ಗುಣಗಳೆಂದು ಜಯಾಪೇಕ್ಷೆಯು ಹೊಗಳ ತಕ್ಕದ್ದು."

ಪಕ್ವಾತೀತನಾಗಲು ಯೋಚಿಸಿದ್ದ ಈ ರಾಜನೀತಿಜ್ಞ ಅದನ್ನು ಸಾಧಿಸದೇ ಹೋದ, ಯುದ್ಧ ತಡೆಗಟ್ಟಬೇಕೆಂದೂ ತನಗಿಂತ ದೊಡ್ಡ ಶಕ್ತಿಯ ಸೆಳೆತಕ್ಕೆ ಒಳಗಾಗಿ ಯುದ್ಧ ಹೂಡಿದ. ನೀತಿ-ನಿಷ್ಠೆಯಿಲ್ಲದ ಸಾಧನಗಳಿಂದ ವಿಜಯ ಗಳಿಸಿದ, ಮಾನವ ಸೇವೆಯೆಂದು ಮಾನವೀಯ ಶತೃವಾದ, ಮಹಾ ಮುತ್ಸದ್ಧಿಯೆಂದು ಲೋಕ ಹೊಗಳುತ್ತಿತ್ತು, ಮತ್ಸರದ ಮೂರ್ಖತೆಯು ಬೆಳೆದಿತ್ತು. ಆದರೆ ಕೊನೆಗೆ ಅವನೇ ಒಪ್ಪಿಕೊಂಡಿದ್ದಾನೆ.

ಜನತೆಗಾಗಿ ನನ್ನ ಜನ್ಮ ಎಂಬುದನ್ನು ಅರಿಯದ ಅಣ್ಣನು ನಾನೆಂದೇ ಲೇಖಕ ತನಗೆ ತಾನೇ ಕರೆದುಕೊಂಡಿದ್ದಾನೆ.

### ೨) ಲೇಖಕ

ಈತನು ಸಾಹಿತ್ಯ ರಂಗದಲ್ಲಿ ಯಶಸ್ಸು ಗಳಿಸಿದ್ದ. ವಾಲ್ಮೀಕಿಯ ಘನತೆ, ಗೌರವ, ಕಾಳಿದಾಸನ ಕೀರ್ತಿ ಪಂಪನ ಪೆಂಪು ಕುವೆಂಪುವಿನ ಕಂಪು, ಸಿಸಿರೋನ ಪ್ರೌಢಿಮೆ, ವರ್ಡ್ಸ್ ವರ್ತನ ಸರಳತೆ, ಶೇಕ್ಸ್‌ಪಿಯರನ ಮೋಹಕತೆ, ಕುಮಾರ ವ್ಯಾಸನ ಸಹಜತೆ ಇವು ಅವುವೂ ಅವನಿಗೆ ಅಸಾಧ್ಯವೆನಿಸಲಿಲ್ಲ. ಆದರೆ ಆತನೆ ಹೇಳಿಕೊಂಡಿದ್ದಾನೆ.

“ಹೀಗಿದ್ದೂ ನನ್ನಿಂದ ಏನೂ ಆಗಿಲ್ಲ. ನನಗೆ ಸಮಾಧಾನವೇ ಇಲ್ಲ. ನಾನು ಬಹು ಖಿನ್ನನಾಗಿರುವೆ. ವಸ್ತುಗಳ ನಿಜ ಸತ್ಯವನ್ನಾಗಲಿ, ಅವುಗಳ ಆತ್ಮ ಸೌಂದರ್ಯವನ್ನಾಗಲಿ ನಾನು ತಿಳಿದುಕೊಳ್ಳಲೇ ಇಲ್ಲ, ಬರೀ ಹೊರ ಮೈಮೇಲೆ ಕೈಯ್ಯಾಡಿಸಿರುವೆನು.”

ಅಂತಯೇ ಆತನ ಸಿದ್ಧಾಂತವು ಹೀಗಿದೆ. ‘ಮಹಾ ಮೌನವೇ, ಕೇವಲ ಮೂಕತೆಯೇ ಪ್ರಪಂಚದ ಅಂತರಾತ್ಮಕ್ಕೆ ಸನಿಹದ ಸಂಬಂಧಿಯೆಂದು ಕೊಟ್ಟಕೊನೆಗೆ ನನಗನಿಸಿದೆ. ಅವನ ಜೀವನದ ಕೊನೆಯಲ್ಲಿ ಪ್ರಶ್ನಾರ್ಥಗಳೇ ಉಳಿದಿವೆ. ನನ್ನದೆಲ್ಲಾ ಕಲ್ಪನೆಯೇ ಅಲ್ಲದೆ ಜಗದ ಕಾಣಿಕೆಯಾಗಿಲ್ಲ. ಅವನ ಮಾತುಗಳಿಂದಲೇ ಅರಿಯಬಹುದು. ನನ್ನ ಜೀವನದ ಕೊನೆ ಅಜ್ಞ ಬಾಲಕನಂತೆ ಇಂತುಕೇಳುತ್ತಿದ್ದೇನೆ.

ಇದೆಲ್ಲಾ ಏನು ? ಹುಟ್ಟಿದೇಕೆ ? ಹುಟ್ಟಿನ ಗುಟ್ಟೇನು ? ಸಾಧನೆಯೇನು ? ಸಾಯುವುದೇಕೆ ? ಸಾಕ್ಷಾತ್ಕಾರವೆಲ್ಲಿ ? ಈ ಪ್ರಯತ್ನ ! ಈ ಜೀವನದ ಕಲಹ ! ಈ ಸುಖದ್ವದ್ವಂ !! ಯಶಾಪಯಶಗಳ ಸಂಘರ್ಷಣವೆಲ್ಲಿ ? ಏತಕ್ಕಾಗಿ ಬದುಕು ? ಬದುಕಿನ ಸಾರ್ಥಕತೆ ಯಾವುದು ? ಎಂಬ ಪ್ರಶ್ನೆಗಳ ಹುತ್ತವೇ ತನ್ನ ಬದುಕಿನ ಕುತ್ತಗಳೆಂದು ತಾನೇ ಸಮರ್ಥಿಸಿಕೊಂಡಿದ್ದಾನೆ. ತನ್ನ ಅರಿವು ಅಂತರಾತ್ಮನತ್ತ ಸಾಗಿ, ಆನಂದದನೆಲೆ ನೀಡಿಲ್ಲವೆಂಬುದೇ ಅವನ ಬಯಕೆಯಾಗಿದೆ.

### ೩) ವಿಜ್ಞಾನಿ

ವಿಶೇಷ ಜ್ಞಾನದ ಹಿರಿಮೆಯಿಂದ, ಶಕ್ತಿಯನ್ನು ಹೆಚ್ಚಿಸಿ ತನ್ಮೂಲಕ ಸಫಲತೆಯನ್ನು ಪಡೆಯಲು ಹೊರಟ ಮಹತ್ವಾಕಾಂಕ್ಷಿಯೀತ,- ಅವನ ಸ್ವಾರ್ಥ ಲೋಭಗಳಿಗೆ ಬಲಿಯಾಗಿ, ಸತ್ಯ–ಶೀಲ--ಶಾಂತಿ ಧರ್ಮ-ಜ್ಞಾನಗಳ ತಪ್ಪುದಾರಿಯಲ್ಲಿ ನಾನು ನಡೆದಿದ್ದೇನೆ. ನನ್ನ ಹುಳುಕು ನನಗೇ ಗೊತ್ತು ಅನ್ಯರಿಗೆ ತಿಳಿಯದು ಎಂಬುದೇ ಅವನ ಕೊನೆಯ ಬಯಕೆಯೆಂದು ಹೇಳಿದ್ದಾನೆ ಮಹತ್ವಾಕಾಂಕ್ಷೆಯೂ ಸಾಧಿಸಿತ್ತು. ಮಹಾ ಸಂಶೋಧನೆಯ ಸಿದ್ಧಿಯಿಂದ ಯಶಸ್ಸುಗಳಿಸಿದಾತ. ಆದರೆ ಅವನ ಶೋಧನೆಗಳ ಭೀಕರ ಸ್ವರೂಪದಿಂದಲೇ ಅವನ ತಲೆ ತಿರುಗ ಹತ್ತಿತು. ಅದನ್ನು ಅವನೇ ಹೀಗೆ ಹೇಳುತ್ತಾನೆ.

“ನನ್ನ ಬುದ್ಧಿಯನ್ನು ಅಂತಕರಣವನ್ನೂ ಸಮಾಧಾನ ಪಡಿಸುವಂತಹ ಯಾವುದೇ ನಿರ್ಣಯಕ್ಕೆ ನಾನು ಬಂದಿಲ್ಲ.”

‘ಜಡದ ಸತ್ಯ ಕಾಣಲು ಹೊರಟು, ಚೇತನ ರೂಪದ ಆತ್ಮನ ಅರಿವನ್ನೇ ಕಾಣದ ಕುರುಡನು ನಾನು.

ಜ್ಞಾನದ ವಿಸ್ತಾರದಿಂದ ಶಕ್ತಿಯು ಆಧಿಕ್ಯವಾದರೆ ಸ್ವತ ಏವ ವಯನವ ಕಾಲವು ಅಭಿವೃದ್ಧಿಗೊಳ್ಳಲೆನ್ನುವುದು ಪೂರ್ಣವಲ್ಲವು. ವೈಜ್ಞಾನಿಕ ಪ್ರಗತಿಯೆಂದರೆ ಅವಶ್ಯಕವಾಗಿ ನೈತಿಕ ಪ್ರಗತಿಯೆಂದು ಹೇಳಲಾಗದು. ಮಾನವ ಸ್ವಭಾವವನ್ನು ಪಲ್ಲಟಿಸುವಲ್ಲಿ ವೈಜ್ಞಾನಿಕ ಮತ್ತು ಬೌದ್ಧಿಕ ಜ್ಞಾನವು ದುರ್ಬಲವಾಗಿದೆ. ಮೂಲ ಭೂತವಾದ ನೈತಿಕ ಸುಧಾರಣೆಯಾಗದಿದ್ದರೆ, ತನ್ನ ಕೈಗೆ ಬಂದ ಈ ಅದ್ಭುತ ಶಕ್ತಿಯಿಂದಲೇ ಅಳಿದು ಬಿಡುವುದೆಂಬ ಅವಸ್ಥೆಗೆ ಇಂದು ಅದು ಬಂದಿದೆ.

ವಿಜ್ಞಾನದ ಕ್ಷೇತ್ರದಲ್ಲಿ ಯಶದ ಶಿಖರಕ್ಕೇರಿದ ಆದರ ಅಸಮತೆ. ಆ ಸಾಮರ್ಥ್ಯತೆಯನ್ನು ಒಪ್ಪಿಕೊಂಡಂತಾಗಿದೆ. ‘ ಗಾಣದ ಎತ್ತಿನಂತೆ ಸತ್ಯದ ಸುತ್ತು ತಿರುಗುವ ಸತ್ಯದ ಸಮಗ್ರ ಶೋಧನೆಯಲ್ಲಿ ಯಶಸ್ವಿಯಾಗಿಲ್ಲವೆಂಬುದೇ ಆತನ ಅಭಿಪ್ರಾಯ. ಬೆಳೆದ.



ವಿಜ್ಞಾನ ಸ್ವಾರ್ಥದ ಅಸ್ತ್ರವಾಗಿ ಜಗತ್ತನ್ನು ನುಂಗುತ್ತಿದೆ, ಮಮತೆಯ ಬೆಳಕು ಮತೀಯ ಜ್ಞಾನವಾದಲ್ಲಿ ಮಾನವೀಯ ಮಹತ್ಸಾಧನೆ. ಎಂಬುದೇ ಆತನ ಅಂತಿಮ ಬಯಕೆ.

### ಕಲಾವಿದ

ಇತರರಂತೆ ಈತನೂ ತನ್ನ ರಂಗದಲ್ಲಿ ವಿಶೇಷ ಪ್ರಖ್ಯಾತಿಯನ್ನು ಪಡೆದ- ಪ್ರಥಮ ಪಾರಿತೋಷಕಗಳು ಹೆಚ್ಚಿನ ಮನ್ನಣೆ ಪಡೆದ. ಕೀರ್ತಿ, ಪ್ರಶಸ್ತಿಗಳಿಗೇನೂ ಕೊರತೆಯಿರಲಿಲ್ಲ. ಸಾಕ್ಷಾತ್ ಕಲಾ ದೇವತೆಯೆಂದೇ ಲೋಕ ಇವನನ್ನು ಹೊಗಳುತ್ತಿದೆ. ಇಷ್ಟಾದರು ಅವನ ಅತೃಪ್ತಿಯ ಧ್ವನಿ ಹೀಗೆ ಹೊರಬಂದಿದೆ.

“ ಆದರೇನು ನನಗೆ ನೆಮ್ಮದಿಯಿಲ್ಲ. ಮಾನವ್ಯದ ಬಂಧನಕ್ಕೆ ನಾನೇ ಒಳಗಾಗಿರುವವನೆ ! ಭೌತಿಕ ನಿಸರ್ಗದ ರೂಪ ರಚನೆಯಿಂದ ಸಂಪೂರ್ಣ ಬಿಡುಗಡೆಯನ್ನು ನಾನು ಪಡೆಯಲಾರೆನು. ”

‘ ಪ್ರಕೃತಿಯ ರೂಪ ರೇಖೆಗಳನ್ನು ತೋರಿಸುವೆನೇ ವಿನ: ಆತ್ಮನ ಅರಿವಿನ ಅಂತ: ಪ್ರೇರಣಾ ಕಲಾ ಕೊರತೆಯನ್ನು ಕಾಣದ ಕೊರಗು ಕಾಡುತ್ತಿದೆ ನನಗೆ;

ಕೀರ್ತಿಯ ರಾಶಿಯನ್ನು ನ್ನನ ತಲೆಯ ಮೇಲೆ ಸುರುವಿದರೂ, ಮಾನವಮೂರ್ತಿಯಾಗದ ನನ್ನಂತಹ ಅಯಶಸ್ವಿಯು ಬೇರೊಬ್ಬರಿಲ್ಲವೆಂದು ನನಗನಿಸುತ್ತಿದೆ.

### ಉದ್ಯಮಪಟು:

ಮುಟ್ಟಿದೆಲ್ಲಾ ಚಿನ್ನವಾಗುವಂತಹ ಯಶಸ್ಸನ್ನು ಈ ಉದ್ಯಮ ಕ್ಷೇತ್ರದಲ್ಲಿ ಪಡೆದ. ಆತನ ಅತಿಯಾದ ಯಶಸ್ಸೇ ಆತನ ತೊಡಕುಗಳನ್ನು ಹೆಚ್ಚಿಸಿತು. ಹೆಚ್ಚಿನ ವೇತನ ಪಡೆಯುತ್ತಿದ್ದ ಕೆಲಸಗಾರರು, ಇನ್ನೂ ಹೆಚ್ಚಿನ ವೇತನದ ಆಸೆಯಿಂದ ಅತೃಪ್ತರಾಗಿಯೇ ಉಳಿದರು. ಜನ ಸಂಚಾರಕ್ಕೆ ಸುಲಭ ವಾಹನ ಸೌಕರ್ಯ ಹೆಚ್ಚಿಸಿದ. ಆದರೆ ಜನರು ಪರಸ್ಪರ ಅರಿತುಕೊಳ್ಳುವಂತೆ ಮಾಡಲು, ಈತನಿಗಾಗಲಿ, ಈತ ಸಿದ್ಧಪಡಿಸಿದ ವಾಹನಕ್ಕಾಗಲೀ ಸಾಮರ್ಥ್ಯವಿರಲಿಲ್ಲವೆಂದು ಈತನು ಅರಿತುಕೊಂಡನು. ಅವನ ಅತೃಪ್ತಿ, ಅವನ ನಿರ್ಮೂಲನಗಳಲ್ಲಿಯೇ ಹೀಗೆ ಮೂಡಿ ಬಂದಿದೆ.

“ ನಾನು ಎಣಿಸಿದ್ದು ಒಂದು ! ಆದದ್ದು ಮಾತ್ರ ಇನ್ನೊಂದು,- ಜೀವನದ ಮಟ್ಟ ಎದುರಿಸುವುದಾಗಲೀ, ಕಲ್ಯಾಣದ ಆಶ್ವಾಸದಿಂದಾಗಲಿ, ಮನುಷ್ಯತ್ವದ ಪೋಷಣೆಗೇನೂ ಸಹಾಯವಾಗಿಲ್ಲ.”

ನಿಜವಾಗಿಯೂ ಮಾನವನ ದು:ಖ ಯಾತನೆಯ ಪ್ರಮಾಣವು ಎಂದಿನಂತೆ ಭೀಕರವಾಗಿಯೇ ಉಳಿದಿದೆ. ದುಡಿಮೆಯ ಕೊರತೆಯು ಎಲ್ಲರ ದು:ಖವಾಗಿರುವುದಾಗಿ ತಿಳಿಸಿದ್ದಾನೆ.

ನಿರುದ್ಯೋಗ ನಿವಾರಣೆಗೆ ಉತ್ಸುಕತೆಯ ಉದ್ಯಮದ ಉತ್ಪಾದನೆಯು ಆಳು-ಒಡೆಯರ ಏಕತೆಯಾಗಿರುತ್ತದೆ. ಈ ಏಕತೆಯ ಕೊರತೆಯೇ ಉದ್ಯಮಪಟುವಿನ ಪರದಾಟವಾಗಿರುತ್ತದೆ.

### ವ್ಯಾಯಾಮಪಟು

ಡ್ರಿಲ್ ಮಾಸ್ಟರ್ ಪದದಿಂದಶಾರೀರಿಕಶಿಕ್ಷಣ ಮಂತ್ರಿಯ ಸ್ಥಾನದವರೆಗಿನ ನಿಚ್ಚಣಿಕೆಯನ್ನೇರಿದವನೀತ. ಎಲ್ಲಾ ಕಡೆಗೂ ಪ್ರಥಮ ಸ್ಥಾನ ಗಳಿಸಿದ. ಸೇನೆಯ ದಂಡನಾಯಕನಾಗಿ ಅಂತರಾಷ್ಟ್ರೀಯ ಪ್ರಶಸ್ತಿಗೂ ಪಾತ್ರನಾದ. ಹೀಗಿದ್ದೂ ವಿಷಣ್ಣತೆ; ಶೂನ್ಯತೆ ಈ ಭಾವಗಳ ಅನುಭದಿಂದ ಈತ ದೂರವಾಗಲಿಲ್ಲ. ಕೊನೆಗೂ ಆತ ಒಪ್ಪಿಕೊಂಡುದು ಹೀಗೆ.

“ ನಾನಿನ್ನು ಪ್ರಕೃತಿಯ ದಾಸ, ಓರ್ವ ಪಾಮರ. ಅಜ್ಞ ಮತ್ತು ಅಸಮರ್ಥ, ನನ್ನ ಯೋಗ್ಯತೆಗೂ ಪರಿಮಿತಿ ಇದೆ. ಅಪಘಾತ; ಅನರ್ಥಗಳಿಗೂ, ಅನಾರೋಗ್ಯಗಳಿಗೂ ನನ್ನ ಶಕ್ತಿಯನ್ನೆಲ್ಲಾ ಬಳಸಿದ ತಿಳಿಗೇಡಿ. ಮಾನಸಿಕ ವಿಕಾರಗಳಿಗೆ ತುತ್ತಾಗಬಲ್ಲ ಸಾಮಾನ್ಯ ಮಾನವನೇ.”

ದೇಹ ಬಲವಾಗಿ ಬೆಳೆದಿದೆ. ಬುದ್ಧಿ ತಿಳಿಯಾಗಿ ಬೆಳಗಿಲ್ಲ. ಆತ್ಮನ ಅರಿವಿಲ್ಲದ ಪಾಮರನು. ವಿಚಾರ ವಿವೇಕಗಳ ಕೊರತೆಯಲ್ಲಿ, ಮಾನವೀಯ

ಶೀಲವರಿಯದೆ ಮುನ್ನುಗ್ಗುವ ಮೂರ್ಖತೆ ಮರೆಯಾಗಿಲ್ಲ. ನನಗೆ' ಎಂದು ತಾನೇ ಒಪ್ಪಿಕೊಂಡಿದ್ದಾನೆ.

**ಅಜ್ಞಾತವ್ಯಕ್ತಿ:**

ಹೀಗೆ ಆರು ಜನ ಪ್ರಸಿದ್ಧ ವ್ಯಕ್ತಿಗಳು ತಮ್ಮ ಅಸಮರ್ಥತೆಯನ್ನು, ನಿರಾಶೆಯನ್ನು, ಅತೃಪ್ತಿಯನ್ನು ತೋಡಿಕೊಂಡರು. ಆಗ ಅಜ್ಞಾತ ವ್ಯಕ್ತಿ ಹೇಳುತ್ತಾನೆ

"ನೀವು ಅರಿಯ ಬಯಸಿದ್ದನ್ನು ನಾನು ಹೇಳಬಲ್ಲೆನು."

ನೀವೆಲ್ಲರೂ ವಸ್ತುಗಳ ಹೊರ ನೋಟವನ್ನು ಮಾತ್ರ ಲಕ್ಷಿಸುತ್ತ, ವಿಶ್ವದ ನಿಜ ಸತ್ಯವನ್ನು ಅರಿತುಕೊಳ್ಳದೇ, ಕೇವಲ ಬಾಹ್ಯ ಪ್ರಪಂಚದಲ್ಲಿಯೇ ವರ್ತಿಸಿದಿರಿ.

ಎಷ್ಟೇ ಶ್ರೇಷ್ಠವಾಗಿದ್ದರೂ 'ಮನೋಮಯ ಮನುಷ್ಯನಿಂದ ಈ ಸಮಸ್ಯೆಯು ಬಿಡಲಾರದು. ಅದಕ್ಕಾಗಿ ನೂತನವಾದ ಉದಾತ್ತತರವಾದ ಜಾಗ್ರದವಸ್ಥೆಯಲ್ಲಿ ಅರ್ಥಾತ್ ಸತ್ಯಪ್ರಜ್ಞೆ ಇಲ್ಲವೇ ಆತ್ಮಚೇತನದಲ್ಲಿ ಅವನು ಅವತರಿಸಬೇಕಾಗುವುದು.

"ವ್ಯಕ್ತಿ ಪ್ರಪಂಚದ ಹಿಂದೆ ಅವ್ಯಕ್ತ ಶಾಶ್ವತ ಸತ್ಯವೊಂದಿದೆ.' ಈ ಸತ್ಯವು ಸದ್ವಸ್ತುವು, ನಿಮ್ಮ ಆತ್ಮದ ಆದರದಂತೆ ವಿಶ್ವದ ಕೇಂದ್ರಗಳಲ್ಲಿ ಅತಿ ಸಮೀಪದಲ್ಲಿದೆ. ನೀವು ಅದನ್ನು ಕಾಣಬೇಕು. ಮತ್ತು ಪ್ರೀತಿಸಬೇಕು. ಅದನ್ನು ನಿಮ್ಮಲ್ಲಿ ಮೈಗೂಡಿಸಿಕೊಳ್ಳಬೇಕು ಅಷ್ಟೆ. ಅಂದರೆ ನಿಮ್ಮ ಎಲ್ಲಾ ಸಮಸ್ಯೆಗಳನ್ನೂ ಬಗೆಹರಿಸಿಕೊಂಡು ಎಲ್ಲಾ ತೊಂದರೆಗಳನ್ನು ನೀಗುವಿರಿ.

ಅಜ್ಞಾತ ವ್ಯಕ್ತಿ ಹೇಳುತ್ತಿರುವ ಮಾತುಗಳಲ್ಲಿ ಇಂದಿನ ವಿಶ್ವದ ವಿಷಮತೆಯನ್ನು, ಸಮಸ್ಯೆಯನ್ನು, ರೋಗವನ್ನು ಅರಿತುಕೊಂಡು ಅದಕ್ಕೆ ತಕ್ಕ ಪರಿಹಾರಗಳಾದ ಆದರ' ಆತ್ಮೀಯತೆ, ಅರಿವು' ಆನಂದ ಆತ್ಮ, ಪರಮಾತ್ಮ ಈ ದಾರಿಯಲ್ಲಿ ಸಾಗಿ ಮಾನವೀಯ ಸಂದೇಸದ ಆದರ್ಶ ಪಡೆಯಬೇಕಾಗಿದೆ. ಕೆಳಗಿನ ವಾಣಿಯಲ್ಲಿ ಹೊರ ಹೊಮ್ಮಿದೆ ಸಂದೇಶದ ಕಳೆಯು.

'ವಸ್ತುತಃ ಪ್ರಕೃತಿಯ ಪ್ರವೃತ್ತಿಯೆಲ್ಲ ಪರಮ ಸದ್ವಸ್ತುವಿನೆಡೆಗೆ ಸಾಗಿರುವ ಪ್ರಗತಿಪರ ಸಂಚಲನವೆ ಆಗಿದೆ. ನಮ್ಮ ಜೀವ ಸತ್ವದ ಆಳದಲ್ಲಿ ಅವಿತಿರುವ ಸತ್ಯ, ಸೌಂದರ್ಯ, ಸಾಮರ್ಥ್ಯ, ಪರಿಪೂರ್ಣತೆಗಳನ್ನು ನಾವು ಸಮಗ್ರವಾಗಿ ಇದ್ದು ತೋರಿಸಬೇಕು. ಆಗ ಮಾತ್ರ ಜೀವನವೆಲ್ಲಾ ಮಹೋನ್ನತ, ಶಾಶ್ವತ, ಆನಂದದ ಆವಿಷ್ಕಾರವಾಗುವುದು.'

ಇದೀಗ ಮಾನವನ ಜೀವನದ ಮಹಾ ರಹಸ್ಯ ಕೇವಲ ಹೊರಗಿನ ಆಟದಲ್ಲಿ, ಹೋರಾಟದಲ್ಲಿ ತೊಡಗಿದವರು "ಈ ಮಹಾರಹಸ್ಯ" ಅರಿಯದೆ ಬಳಲುವುದುಂಟು. 'ಮಮತೆ ಮಾನವೀಯ ಸಂಪತ್ತು, ಅರಿವೆ ಪರಮಾತ್ಮ ಎನ್ನುವ ಭಾವದ ಬೆಳಕಲ್ಲಿ ಭವ್ಯತೆ ಮತ್ತು ಭಗವಂತನ್ನನ್ನು ಕಾಣಬಲ್ಲರು. ಬಳಲುವುದನ್ನು ತಪ್ಪಿಸಿಕೊಳಲು ಸಾಧ್ಯವಿದೆ. ಅದು ಹೇಗೆಂಬುದನ್ನು ತನ್ನಿಂದ ತಾನೇ ಕಾಣಬೇಕಾಗಿದೆ.

"ಲೌಕಿಕ ಜಯವಂತರುಂಟು ಪಲಂಬಿರ್.........ಅಲೌಕಿಕ ಪಾರಮಾರ್ಥವೆರಡಾ—....ಪಡೆವುದು ದುರ್ಲಬ.- ಎಂಬುದು ಭರತೇಶನ ವಾಣಿಯಾಗಿದೆ. ಹಲವರಾಗಿರುವ ಲೌಕಿಕ ಜಯವಂತರ ಸೋಲನ್ನು ಮತ್ತು ದುರ್ಬಲವಾಗಿರುವ ಮಹಾರಹಸ್ಯವನ್ನು ಕೈಗೂಡಿಸಿಕೊಳ್ಳುವ ಗೆಲುವಿನ ಹಾದಿಯೇ ಮಹಾರಹಸ್ಯ.

ಪ್ರಜ್ವಲಿತೋಜ್ಞಾನಮಯಃ ಪ್ರದೀಪ : ! —

### ಕೆಚ್ಚು—ಹುಚ್ಚು

ದೇವರೊಬ್ಬನೇ ಒಬ್ಬ ಹೆಸರುಗಳು ಬಹಳ !
ನಿಜವನರಿತವಗಿಲ್ಲ ಇದಕಾಗಿ ಜಗಳ ॥

ನಮ್ಮ ದೇವರು ಹೆಚ್ಚು ನೋಡೆಂಬ ಕೆಚ್ಚು !
ಜನುಮ ಜನುಮಗಳಲ್ಲಿ ಬಿಡದಿರುವ ಹುಚ್ಚು ॥



# ಎಸ್ಪರಾಂಟೋ

—ಪ. ರಾಮಕೃಷ್ಣ ಶಾಸ್ತ್ರಿ

ಭಾಷಾ ಭೇದದಿಂದ ರಾಷ್ಟ್ರಗಳಲ್ಲಿ ಉಂಟಾಗುವ ಅನೇಕ ತೊಡಕುಗಳನ್ನು, ತಪ್ಪು ತಿಳುವಳಿಕೆಗಳನ್ನು ನಿವಾರಿಸಿ ವಿಶ್ವ ಬಾಂಧವ್ಯ ಸ್ಥಾಪಿಸಬೇಕೆಂಬ ಸಂಕಲ್ಪದಲ್ಲಿ ಜಗತ್ತಿನ 50 ಕ್ಕೂ ಹೆಚ್ಚು ರಾಷ್ಟ್ರಗಳಲ್ಲಿ 10 ಲಕ್ಷಕ್ಕಿಂತ ಹೆಚ್ಚಿನ ಜನರು ಮನುಷ್ಯ ನಿರ್ಮಿತ ಕೃತಕ ಭಾಷೆಯೊಂದನ್ನಾಡುತ್ತಾರೆ. ಈ ಭಾಷೆಗೆ 'ಎಸ್ಪರಾಂಟೋ" ಎಂದು ಹೆಸರು, ಇದನ್ನಾಡುವವರು ಅಂತರಾಷ್ಟ್ರೀಯ ಮೈತ್ರಿಗೆ ಸಹಾಯಕವಾದ ರೋಟರಿ ಕ್ಲಬ್ಬುಗಳಂತೆ ವಿಶ್ವ ಬಂಧುತ್ವದ ಸಂಕೇತವಾಗಿ, ಮಧ್ಯೆ 'ಇ" ಅಕ್ಷರವಿರುವ ನಕ್ಷತ್ರದ ಚಿಹ್ನೆಯನ್ನು ತೋಳಿನಲ್ಲಿ ಧರಿಸುತ್ತಾರೆ, 'ಇ' ಎಂದರೆ ಎಸ್ಪರಾಂಟೋ ನಕ್ಷತ್ರದ 5 ಮೊನೆಗಳು ಖಂಡಗಳ ಸೂಚಕ.

ಎಸ್ಪರಾಂಟೋದಲ್ಲಿ ಇಂಗ್ಲೀಷಿನಂತೆ ವಿಪರೀತ ಸ್ಪೆಲಿಂಗುಗಳಿಲ್ಲ. ಅದರ ಸ್ಪೆಲಿಂಗು ಅತಿ ಸರಳ, ಭಾಷೆ ಕಲಿಯಲು ತೀರ ಸುಲಭ. ಯುರೋಪಿನ ಪ್ರಾಮುಖ್ಯ ಭಾಷೆಗಳ ಸಾರವನ್ನೊಳಗೊಂಡಿರುವ ಈ ಭಾಷೆಯಲ್ಲಿ ಒಂದೇ ನಿಯಮಕೊಳಪಟ್ಟ ಧಾತು ರೂಪಗಳಿವೆಯಲ್ಲದೆ ಭಾಷೆ ಧ್ವನಿಗನುಸಾರವಾಗಿದೆ.

ವಿಶ್ವದ ಪ್ರತಿಯೊಬ್ಬರೂ ಒಂದೇ ಭಾಷೆಯನ್ನಾಡುವಂತಾಗಬೇಕು- ಎಂದು ಬ್ಯಾಲದಲ್ಲಿಯೇ ಕನಸು ಕಾಣುತ್ತಿದ್ದಪೋಲೆಂಡಿನ ಲುಟ್ವಿಕೋ ಜಮೆನ್ ಹಾಫ್ ಎಂಬ ಯುವಕ ಈ ಭಾಷೆಯ ಸೃಷ್ಟಿಕರ್ತ. 1887 ರಲ್ಲಿ ಆತ ಡಾಕ್ಟರ್ 'ಎಸ್ಪರಾಂಟೋ' [ಆಶಾವಾದಿ] ಎಂಬಕಾವ್ಯನಾಮವನ್ನಿಟ್ಟುಕೊಂಡು ಈ ವಿಶ್ವ ಭಾಷೆಯ ಪುಸ್ತಕವನ್ನು ಬರೆದು ಪ್ರಕಟಿಸಿದ ನೇತ್ರ. ತಜ್ಞನಾದ ಆತ ತನ್ನ ಬಿಡುವಿನ ವೇಳೆಯನ್ನು ಭಾಷೆಯ ಉನ್ನತಿಗಾಗಿಯೇ ವ್ಯಯಿಸಿದ.

ಅದರಿಂದ ಜನ ಅವನನ್ನು ಹುಚ್ಚನೆಂದೇ ಕರೆದರು. ಆದರೆ ಅವನದೇ ಕಾವ್ಯ ನಾಮವನ್ನು ಹೊತ್ತ ಈ ಭಾಷೆ ಭಾರತದಲ್ಲೂ ಬಳಕೆಯಲ್ಲಿದೆ.

ಯುರೋಪಿನ ಮುಖ್ಯ ಭಾಷೆಗಳಾದ ಲ್ಯಾಟಿನ್, ಜರ್ಮನ್' ರೊಮಾನ್ಸ್, ಗ್ರೀಕ್ ಹಾಗೂ ಸ್ಲಾವಿಕ್ ಭಾಷೆಗಳಿಂದ ಆರಿಸಿದ 3500 ಶಬ್ದಗಳ ತಳಪಾಯದಿಂದ ಕಟ್ಟಿದ್ದ ಎಸ್ಪರಾಂಟೋದ ವ್ಯಾಕರಣವೆಲ್ಲ 16 ನಿಯಮಗಳಿಗೊಳಪಟ್ಟಿದೆ. ಇದರ ವರ್ಣ ಮಾಲೆಯಲ್ಲಿ 28 ಅಕ್ಷರಗಳಿವೆ. ಒಂದೊಂದು ಅಕ್ಷರಕ್ಕೂ ಒಂದು ಧ್ವನಿ ನಿಗದಿಗೊಳಿಸಲ್ಪಟ್ಟಿದೆ. ಇಂಗ್ಲೀಷಿನಂತೆ ಅದರಲ್ಲಿ ಶೂನ್ಯಾಕ್ಷರಗಳಿಲ್ಲ- ಬರೆದ ಹಾಗೆಯೇ ಓದಬೇಕು. ಪ್ರತಿ ಗುಣವಾಚಕಗಳ ಮುಕ್ತಾಯದ ಅಕ್ಷರ 'ಎ' ಎ ಯನ್ನು 'ಇ" ಮಾಡಿದರೆ ಕ್ರಿಯಾ ವಿಶೇಷಣ ಪುಲ್ಲಿಂಗ ಶಬ್ದದ ನಡುವೆ ಇನ್ ಸೇರಿಸಿದರೆ ಸ್ತ್ರೀ ಲಿಂಗ 'ಜೆ' ಸೇರಿಸಿದರೆ ಬಹುವಚನ. ಇರುವಲ್ಲಿ 'ಎ' ಸೇರಿ

ಸಿದರೆ ಗುಣ ವಾಚಕ.

ಯಾವುದಾದರೊಂದು ಶಬ್ದಕ್ಕೆ ಅನೇಕ ಭಾಷೆಗಳಲ್ಲಿ ಒಂದೇ ಅರ್ಥವಿದ್ದರೆ ಆ ಶಬ್ದವನ್ನು ಎಸ್ಪರಾಂಟೋ ಸೇರಿಸಿಕೊಂಡಿದೆ. ಉದಾಹರಣೆಗೆ ಅದರಲ್ಲಿ ಬಳಸಿದ 'KELNERO' ಎಂಬ ಜರ್ಮನ್ ಮೂಲದ್ದು. ಅದಕ್ಕೆ ನಾರ್ವೇಜಿಯನ್, ಇಸ್ಟೋನಿಯನ್, ಲಿಥುವೇನಿಯನ್, ಪೋಲಿಶ್, ಡಚ್, ಮತ್ತು ಬಲ್ಗೇರಿಯನ್ ಭಾಷೆಗಳಲ್ಲಿ ಹೋಟೆಲ್ ಸಪ್ಲಾಯರನೆಂಬ ಒಂದೇ ಅರ್ಥವಿದೆ, ಎಸ್ಪರಾಂಟೋವಿಗೆ ಸರಿ ಸಾಟಿಯಾಗಿರುವ ಸುಲಭೀಕೃತವಾದ ಬೇಜಿಕ್ 'ಇಂಗ್ಲೀಷ್' ಭಾಷೆಯಿದ್ದರೂ ಅದಕ್ಕಿಂತಲೂ ಎಸ್ಪರಾಂಟೋ ವೇ ಹಗುರವೆಂದಿದ್ದಾರೆ. ಭಾಷಾತಜ್ಞರು,

ಎಸ್ಪರಾಂಟೋ ಭಾಷೆಯಿಂದ ಅಂತಾರಾಷ್ಟ್ರೀಯ ಸ್ನೇಹ ಬೆಳೆದೀತೆಂಬ ಭೀತಿಯಿಂದ ಹಿಟ್ಲರ್ ಜರ್ಮನ್ ಭಾಷೆಯನ್ನೇ ಬಳಸಿದವರಿಗೆ ದೇಶ ಬಹಿಷ್ಕಾರ ಶಿಕ್ಷೆ ವಿಧಿಸುವುದಾಗಿ ಸಾರಿದ ಕಮ್ಯುನಿಸ್ಟ್ ರಾಜ್ಯಗಳ ಮೇಲೆ ವಿದೇಶಿಯರ ಪ್ರಭಾವ ಬೀಳಬಹುದೆಂಬ ಕುಕಲ್ಪನೆಯಿಂದ 1930 ರಲ್ಲಿ ರಶಿಯಾವೂ ಎಸ್ಪರಾಂಟೋವಾದಿಗಳನ್ನು ಸೆರೆಮನೆಗೆ ತಳ್ಳಿ, ಈ ಭಾಷೆಯನ್ನು ಪ್ರತಿ ಬಂದಿಸಿತು.

ಎಸ್ಪರಾಂಟೋವಾದಿ ಎಂದರೆ 'ಆಶಾವಾದಿ' ಜಗತ್ತಿನಲ್ಲಿ ಅವರು ಎಲ್ಲಿದ್ದರೂ ಒಬ್ಬರಿಗೊಬ್ಬರು ನೆರವಾಗುತ್ತಾರೆ. ಎಸ್ಪರಾಂಟೋ ಬಾಂಧವ್ಯ ಮಾನವ ಬಾಂಧವ್ಯದ ಕುರುಹು. ಅಮೇರಿಕಕ ಪ್ರಸಿದ್ಧ ಅಂತಾರಾಷ್ಟ್ರೀಯ ತಜ್ಞ ವಾಲ್ಟರ್ ಲಿಪ್ ಎಸ್ಪರಾಂಟೋವಾದಿಯಾಗಿದ್ದ. ಜರ್ಮನಿಯಲ್ಲಿ ಹಿಟ್ಲರನ ದಬ್ಬಾಳಿಕೆಗೆ ಒಳಗಾಗಿದ್ದ ಅವನು ಪಾರಾಗಲಿಕ್ಕೂ ಹೊಸ ಬದಕನ್ನಾರಂಭಿಸಲಿಕ್ಕೂ ಎಸ್ಪರಾಂಟೋ ಬಂಧುಗಳೇ ಸಹಕರಿಸಿದರು. ಹಿಟ್ಲರನು ಜರ್ಮನಿಯಲ್ಲಿ ಅಧಿಕಾರಕ್ಕೆ ಬರುವ ಮೊದಲೇ ಯುರೋಪಿನ ಈ ಆಶಾವಾದಿಗಳು ಮ್ಯುನಿಚ್ ನಗರದ ಹೊರಭಾಗದಲ್ಲಿ ತಮ್ಮದೊಂದು ನಗರ ಸ್ಥಾಪನೆಗೇ ಪ್ರಯತ್ನಿಸಿದ್ದರು. ದ್ವಿತೀಯ ಯುದ್ಧದ ತರುವಾಯ ಒಂದುವರೆ ಕೋಟಿ ಎಸ್ಪರಾಂಟೀ ಸದಸ್ಯರು ಸಂಯುಕ್ತ ರಾಷ್ಟ್ರ ಸಂಸ್ಥೆಯ ಬೆಂಬಲವನ್ನು 'ಎಸ್ಪರಾಂಟೋ' ಗೆ ಬೇಡಿ ಅರ್ಜಿ ಮಾಡಿಕೊಂಡು, ಸಂಚಾರ, ಅಂತಾರಾಷ್ಟ್ರೀಯ ವ್ಯಾಪಾರ ಮತ್ತು ಪತ್ರ ವ್ಯವಹಾರದಲ್ಲಿ ತಮ್ಮ ಭಾಷೆಯನ್ನುಪಯೋಗಿಸಬೇಕೆಂದು ವಿನಂತಿಸಿಕೊಂಡರು.

ಈಗ ಎಸ್ಪರಾಂಟೋದಲ್ಲಿ 150 ಕ್ಕಿಂತ ಹೆಚ್ಚು ಪತ್ರಿಕೆಗಳು ಪ್ರಕಟವಾಗುತ್ತಿವೆಯಲ್ಲದೆ 10,000 ಪುಸ್ತಕಗಳು ಅಚ್ಚಾಗಿವೆ. ಬೈಬಲ್ ಮತ್ತು ಷೇಕ್‌ಸ್ಪಿಯರನ ನಾಟಕವೊಂದೂ ಅನುವಾದಿತವಾಗಿವೆ. ಅಮೇರಿಕ ಹಾಗೂ ಯುರೋಪಿನ 175 ಆಕಾಶವಾಣಿ ಕೇಂದ್ರಗಳಿಂದ ಎಸ್ಪರಾಂಟೋ ಭಾಷೆಯನ್ನು ಪ್ರಸಾರ ಮಾಡಲಾಗುತ್ತಿದೆ. ಎಸ್ಪರಾಂಟೋದ ಭಾಷಾಂತರ ಎಷ್ಟು ನಿಷ್ಕರ್ಷ–ವೆಂದರೆ ಒಂದು ಫ್ರೆಂಚ್ ಪುಸ್ತಕವನ್ನು ಎಸ್ಪರಾಂಟೋ ಸಹಿತ ವಿಶ್ವದ 6 ಬೇರೆ ಬೇರೆ ಭಾಷೆಗಳಿಗೆ ಅನುವಾದಿಸಿ, ಪುನಃ ಆ ಅನುವಾದವನ್ನು ಫ್ರೆಂಚರಿಗೇ ಅನುವಾದಿಸಿದಾಗ ಎಸ್ಪರಾಂಟೋದ ಅನುವಾದ ಮಾತ್ರ ಮೂಲಕ್ಕೆ ಸರಿಯಾಗಿತ್ತು. ಉಳಿದ ಎಲ್ಲಾ ಅನುವಾದಗಳು ಮೂಲಕ್ಕೆ ದೂರವಾಗಿದ್ದವು. ಈಗ ರಶಿಯದಲ್ಲೂ ಎಸ್ಪರಾಂಟೋಗೆ ನಿರ್ಬಂಧವಿಲ್ಲ. ಈ ಭಾಷೆಯ ಪುಸ್ತಕಗಳು ಧಾರಾಳವಾಗಿ ಅಲ್ಲಿಗೆ ಆರಿಸಲ್ಪಡುತ್ತಿವೆ. ಯುರೋಪಿನ ಬಹುತೇಕ ಪೋಲೀಸರು ಮತ್ತು ಅಂಚೆ ನೌಕರರು ಎಸ್ಪರಾಂಟೋ ಮಾತನಾಡುತ್ತಾರೆ. ಒಂದೇ ದಿನದ ಅಭ್ಯಾಸದಿಂದ ಎಸ್ಪರಾಂಟೋ ಶಬ್ದಕೋಶದ ಮೂಲಕ ಈ ಭಾಷೆಯನ್ನು ಮಾತಾಡಲು ಮತ್ತು ಭಾಷಣಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವೆಂದು ಗೊತ್ತಾಗಿದೆ.

—

### ಪುರಂದರದಾಸರ ಬುದ್ಧಿಯ ಮಾತುಗಳು

ಅತಿಶಯದ ಮಾತುಗಳು ಅನ್ನದಾನದ ಹಿಂದೆ.
ಡಂಭಕನ ಕೂಗಾಟ ನಂಬಬೇಡ.

ಅಂಧಕನು ಕಣ್ಣು ಮುಚ್ಚಲು ಯೋಗ ಸಾಧನವೇ ?
ಕೊಂಡ ಸಾಲಗಳನ್ನು ತಿಂದಾತ ಹೊಲೆಯ.



# ಪಶುಗಳ ಸಮತೋಲನ ಆಹಾರ

ಟಿ. ಎನ್. ಸಿದ್ದಪ್ಪ

ಹಾಲು ಉತ್ಪಾದನೆಗೆ ತಗಲುವ ವೆಚ್ಚದಲ್ಲಿ ಶೇಕಡ 50-60 ರಷ್ಟು ವೆಚ್ಚ ಜಾನುವಾರಗಳ ಆಹಾರಕ್ಕಾಗಿಯೇ ಬೇಕಾಗುತ್ತದ.

ಪಶುಗಳಿಗೆ ಆಹಾರವನ್ನು ಅತಿ ಹೆಚ್ಚು ಅಥವಾ ಕಡಿಮೆ ಕೊಡುವುದು ಲಾಭದಾಯಕವಲ್ಲ. ಕೊಡುವ ಆಹಾರ ಸಮತೋಲನವಾಗಿರಬೇಕು.

ತಿಂಡಿಯ ಜೊತೆಗೆ ಶುದ್ಧವಾದ ನೀರನ್ನು ಆದಷ್ಟು ಮಟ್ಟಿಗೆ ಯಾವಾಗಲೂ ಸಿಗುವಂತೆ ಮಾಡಬೇಕು.

**ಚಿಕ್ಕ ಕರುಗಳ ಆಹಾರ:**

ಚಿಕ್ಕ ಕರುಗಳಿಗೆ ಹುಟ್ಟಿದ ತಕ್ಷಣ "ಗಿಣ್ಣು ಹಾಲನ್ನು" ಅಗತ್ಯವಾಗಿ ಕೊಡಬೇಕು. ಗಿಣ್ಣು ಹಾಲು 3-5 ದಿನಗಳವರೆಗೆ ಇರುತ್ತದೆ. ಆಮೇಲೆ ಸುಮಾರು 2 ತಿಂಗಳವರೆಗೆ ಕರುಗಳಿಗೆ ಹಾಲನ್ನು ಅದರ ತೂಕಕ್ಕೆ ಅನುಗುಣವಾಗಿ [ಅಂದರೆ ಅದರ ತೂಕದ $\frac{1}{10}$ ಭಾಗದಷ್ಟನ್ನು] ಕುಡಿಸಬೇಕು. ಗಿಣು ಹಾಲನ್ನು ಕುಡಿಸುವಾಗಲೂ ಇದೇ ಆಧಾರ ಸಾಧಾರ ತೂಕದ ಮೇವನ್ನು ಕೊಡಬೇಕು.

| ಕರುವಿನ ವಯಸ್ಸು | ಕೊಡತಕ್ಕ ಹಾಲಿನ ಪ್ರಮಾಣ | ಮೇಲ್ ತಿಂಡಿ (ತಿಂಡಿ ಮಿಶ್ರಣ) | ಹಸಿ ಹುಲ್ಲು |
|---|---|---|---|
| 1.5 ದಿನ | 3 ಲೀಟರು | — | — |
| 6-14 ದಿನ | 3·5 ಲೀಟರು | — | — |
| 3 ನೇ ವಾರ | 3·5 ಲೀಟರು | 0·15 ಕೆ. ಜಿ. | — |
| 4 ನೇ ವಾರ | 3·0 ಲೀಟರು | 0·35 ಕೆ. ಜಿ | — |
| 5 ನೇ ವಾರ | 1·75 ಲೀಟರು | 0·50 ಕೆ. ಜಿ. | — |
| 6 ನೇ ವಾರ | 1· 00 ಲೀಟರು | 0·70 ಕೆ. ಜಿ. | ಬೇಕಾದಷ್ಟು |
| 7-8 ನೇ ವಾರ | — | 1.00 ಕೆ. ಜಿ. | |
| 3 ನೇ ತಿಂಗಳು | — | 1·50 ಕೆ. ಜಿ. | |
| 4 ನೇ ತಿಂಗಳು | — | 1·75 ಕೆ. ಜಿ. | |
| 5 ನೇ ತಿಂಗಳು | — | 2·00 ಕೆ. ಜಿ | |
| 6 ನೇ ತಿಂಗಳು | — | 2·25 ಕೆ. ಜಿ | |

ಕರುಗಳ ಆಹಾರ ಮಿಶ್ರಣದ ಪ್ರಮಾಣ (ಶೇಕಡ) :

| | I | II | III |
|---|---|---|---|
| ಅಕ್ಕಿ ನುಚ್ಚು ರಾಗಿ ಅಂಬಲಿ | 70 | | |
| ನೆಲಗಡಲೆ ಹಿಂಡಿ, | 20 | 30 | 50 |
| ಗೋಡಿ ತವುಡು | 10 | 20 | 20 |
| ಹುರುಳಿ ನುಚ್ಚು | — | 20 | 20 |
| ಮೆಕ್ಕೆ ಜೋಳದ ನುಚ್ಚು | — | 30 | 10 |

ಷರಾ:—

ಇದರ ಜೊತೆಗೆ ಒಂದು ಭಾಗ ಉಪ್ಪು ಮತ್ತು ಒಂದು ಭಾಗ ಖನಿಜ ಮಿಶ್ರಣವನ್ನು ಸೇರಿಸಿ ಕೊಡಿ.

ಕರು ಮತ್ತು ಹಡ್ಡೆಗಳ ಬೆಳವಣಿಗೆಗೆ ಬೇಕಾದ ಆಹಾರ:—
90—115 ಕೆ. ಜಿ. ತೂಕದ ಕರು

| | ದಿನದ ಆವಶ್ಯಕತೆ |
|---|---|
| 1. ಸಮತೋಲನ ಮೇವು | 0·75 ಕೆ. ಜಿ. |
| 2. ಹಸಿರು ಮೇವು | 2·50 ಕೆ. ಜಿ. |
| 3. ಒಣ ಮೇವು | 1·50 ,, |
| 4. ಖನಿಜ ಮಿಶ್ರಣ | 0·15 ಗ್ರಾಂ |
| 5. ಉಪ್ಪು | 0·30 ಗ್ರಾಂ |

ಬೆಳೆಯುತ್ತಿರುವ ಕರುಗಳಿಗೆ ಬೇಕಾದ ಮೇಲಿನ ಮಿಶ್ರಣದ ಪ್ರಮಾಣ:—

ಮೇಲಿನ ಸಾಮಾನು:—

| | I | II | III |
|---|---|---|---|
| ಮೆಕ್ಕೆ ಜೋಳ, ರಾಗಿ, ಜೋಳ | 30 | 25 | 40 |
| ನೆಲೆಗಡಲೆ ಹಿಂಡಿ | 30 | 40 | 40 |
| ಗೋಧಿ ಅಥವಾ ಅಕ್ಕಿ ತೌಡು | 20 | 20 | 20 |
| ದ್ವಿದಳ ಧಾನ್ಯದ ನುಚ್ಚು | 15 | 15 | — |
| ಖನಿಜ ಮಿಶ್ರಣ | 15 ಗ್ರಾಂ | 15 ಗ್ರಾಂ | 15 ಗ್ರಾಂ |
| ಉಪ್ಪು | 30 ಗ್ರಾಂ | 30 ಗ್ರಾಂ | 30 ಗ್ರಾಂ |

ಹಸುಗಳ ಪೋಷಣೆಗಾಗಿ ಮೇವು:—

[225-300 ಕೆ. ಜಿ. ತೂಕದ ಹಸು]
ಸಮತೋಲನ ಆಹಾರ 1·5 ಕೆ. ಜಿ.



| | |
|---|---|
| ಹಸಿ ಹುಲ್ಲು | 12-16 ಕೆ. ಜಿ |
| ಒಣ ಹುಲ್ಲು | 5-6 ಕೆ. ಜಿ. |
| ಖನಿಜ ಮಿಶ್ರಣ | 30 ಗ್ರಾಂ |
| ಉಪ್ಪು | 30 ಗ್ರಾಂ |

ಪೋಷಣೆಯ ಮೇವು ಮಿಶ್ರಣದ ಪ್ರಮಾಣ:—

ಮೇವಿನ ಸಾಮಾನುಗಳು:— ಮಿಶ್ರಣ

| | I | II | III | IV |
|---|---|---|---|---|
| ಮೆಕ್ಕೆ ಜೋಳ, ಜೋಳ | — | 30 | — | 25 |
| ಹಿಂಡಿ | 30 | 25 | 30 | 30 |
| ಹತ್ತಿ ಕಾಳುಗಳು | — | — | 20 | — |
| ಗೋಧಿ ಬೂಸ, ಅಕ್ಕಿ ತೌಡು | 30 | 20 | 30 | 20 |
| ಹುರುಳಿ ನುಚ್ಚು, ಬೇಳೆ ನುಚ್ಚು | 20 | 15 | — | 25 |
| ದ್ವಿದಳ ಧಾನ್ಯದ ಹೊಟ್ಟು | 20 | 10 | 20 | — |
| ಉಪ್ಪು ಮತ್ತು ಖನಿಜ ಮಿಶ್ರಣ | 2-3ಗ್ರಾಂ | | | |

ಹಾಲಿನ ಉತ್ಪಾದನೆಗೆ ಮೇವು:—

ಪೋಷಣೆ ಆಹಾರದೊಂದಿಗೆ ಪ್ರತಿ 2½-3 ಲೀಟರ್ ಹಾಲು ಉತ್ಪಾದನೆಗೆ ಒಂದು ಕೆ. ಜಿ. ಯಷ್ಟು ಮೇಲೆ ತಿಳಿಸಿರುವ ತಿಂಡಿಯ ಮಿಶ್ರಣವನ್ನು ಕೊಡಬೇಕು.

2] ದಿನ ಒಂದಕ್ಕೆ 15 ಲೀಟರ್‌ಗಿಂತಲೂ ಹೆಚ್ಚಿಗೆ ಹಾಲು ಕೊಡುವ ಹಸುಗಳಿಗೆ.
ಎ] ದೇಹದ ಪೋಷಣೆಗೆ———2-2½ ಕೆ. ಜಿ. ಮಿಶ್ರಣ
ಬಿ] ಪ್ರತಿ 2½-3 ಲೀಟರ್ ಹಾಲಿನ ಉತ್ಪಾದನೆಗೆ———5-6 ಕೆ. ಜಿ.
[15 ಲೀಟರ್ ಹಾಲು ಉತ್ಪಾದನೆಗೆ]
ಸಿ] ಹಸುವು ಕರು ಹಾಕಿದ ಮೊದಲ ಎರಡು ತಿಂಗಳು, ಹಾಲು ಉತ್ಪಾದನಾ ಮೇಣತ್ತಿಗಾಗಿ———¾-1 ಕೆ. ಜಿ. ಮಿಶ್ರಣ

ಇದರ ಜೊತೆಗೆ 50 ಕೆ. ಜಿ ಹಸಿ ಹುಲ್ಲು ಅಥವಾ 25 ಕೆ. ಜಿ. ಹಸಿ ಹುಲ್ಲು ಮತ್ತು 8 ಕೆ. ಜಿ ಒಣ ಹುಲ್ಲನ್ನು ಕೊಡಿ.

ಗಬ್ಬದ ಹಸುವಿನ ಮೇವು:—

ಗಬ್ಬ ಧರಿಸಿದ 6 ತಿಂಗಳ ನಂತರ ಕರು ಹಾಕುವವರೆಗೂ, ಕರುವಿನ ಪೋಷಣೆಗಾಗಿ, ಪೋಷಣೆ ಮತ್ತು ಹಾಲು ಉತ್ಪಾದನೆಯ ಆಹಾರದೊಂದಿಗೆ 0·50 ಕೆ. ಜಿ. ಆಹಾರ ಮಿಶ್ರಣವನ್ನು ಹೆಚ್ಚಾಗಿ ಕೊಡಬೇಕು.

ಮೇವಿನ ಉಪಯೋಗಗಳನ್ನು ಹೆಚ್ಚಿಸುವ ಕ್ರಮ:—

1] ಮೇವನ್ನು ತುಂಡು ತುಂಡಾಗಿ ಕತ್ತರಿಸಿ ಕೊಡಬೇಕು.

2] ಒಣ ಹುಲ್ಲಿನ ಜೊತೆಯಲ್ಲಿ ಸುಮಾರು $\frac{1}{4}$ ಭಾಗ ಅಲಸಂದೆ, ಕಡೆಲೆ, ತೊಗರಿ, ಹುರುಳಿಗ ಹೊಟ್ಟನ್ನು ಕೊಟ್ಟರೆ ಉತ್ತಮ,

3] ಹೆಚ್ಚು ಇಳುವರಿ ಕೊಡುವ ಮೇಲಿನ ಬೆಳೆಗಳಾದ ಮೆಕ್ಕೆ ಜೋಳ ಮತ್ತು ಅಲಸಂದೆ, ಎನ್. ಬಿ 21 ಅಥವಾ ಬಿ. ಎಚ್-18 ಎಂಬ ಬಹುವಾರ್ಷಿಕ ಹುಲ್ಲಿನ ತಳಿಗಳು, ಕುದುರೆ ಮಸಾಲೆ ಸೊಪ್ಪನ್ನು ಬೆಳೆಯಿರಿ.

ಜೌಗು ಭೂಮಿಯಲ್ಲಿ ಬಹುವಾರ್ಷಿಕ ಬೆಳೆಯಾದ ಪ್ಯಾರ ಹುಲ್ಲನ್ನು ಬೆಳೆಯಿರಿ,

ಬದಗಳಲ್ಲಿ ಮತ್ತು ಉಪಯುಕ್ತವಲ್ಲದ ಜಮೀನಿನಲ್ಲಿ ಕೂ-ಬಾಬುಲ್ ಎಂಬ ಗಿಡಗಳನ್ನು ಬೆಳೆದು ಅದರ ಸೊಪ್ಪನ್ನು ದನಗಳಿಗೆ ಮೇವಿಗಾಗಿ ಉಪಯೋಗಿಸಬಹುದು.

4] ಬೇಸಗೆಯ ಉಪಯೋಗಕ್ಕೆ ರಸಮೇವನ್ನು (ಸೈಲೇಜು) ತಯಾರಿಸಿರಿ

5] ಬೆಟ್ಟದ ಹತ್ತಿರ ಇರುವ ಜನರು, ಬೆಟ್ಟದಲ್ಲಿ ಬೆಳೆಯುವ ಹುಲ್ಲನ್ನು ಹೂ ಬಿಡಲು ಪ್ರಾರಂಭಿಸುವಾಗ ಕತ್ತರಿಸಿ, ಬಿಸಿಲಿನಲ್ಲಿ ಒಣಗಿಸಿ ಶೇಖರಿಸಿ ಉಪಯೋಗಿಸಿರಿ.

6] ರಾಗಿ ಮತ್ತು ಭತ್ತದ ಹುಲ್ಲಿನಲ್ಲಿ ಬೇಕಾದ ಸತ್ವಗಳು ಇರುವುದಿಲ್ಲ. ಇದಕ್ಕಾಗಿ ಯೂರಿಯಾ ಮತ್ತು ಕಾಕಂಬಿಯನ್ನು ಕದರಿ, ಒಣ ಹುಲ್ಲಿನ ಮೇಲೆ ಸರಿಯಾಗಿ ಸಿಂಪಡಿಸಿ ಒಣಗಿಸಿದರೆ ಅಂತಹ ಹುಲ್ಲಿನ ಗುಣಮಟ್ಟ ಹೆಚುತ್ತದೆ.

[10 ಕೆ. ಜಿ. ಹುಲ್ಲಿಗೆ 1 ಕೆ. ಜಿ. ಯೂರಿಯಾ ಮತ್ತು 10 ಕೆ. ಜಿ. ಕಾಕಂಬಿ ಬೇಕಾಗುತ್ತದೆ. ]

ಷರಾ:-.- ಚಿಕ್ಕ ಕರುಗಳಿಗೆ ಯೂರಿಯಾ ಮಿಶ್ರಣ ಕೊಡಬಾರದು.

---

## ಅಜ್ಞಾನ—ಸುಜ್ಞಾನ

ಅಜ್ಞಾನಕ್ಕೂ ಸುಜ್ಞಾನಕ್ಕೂ ಅಗಾಧ ವ್ಯತ್ಯಾಸ।
ಅದರೂ ಬಣ್ಣಿಸಲು ಇಲ್ಲ ಆಯಾಸ॥
ತಿಳಿದಂತೆ ನಡೆಯುವುದೇ ಪರಮ-ಸುಜ್ಞಾನ।
ನಿತ್ಯಪ್ರಾಯಶ್ಚಿತ್ತ ನಿರುತ-ಅಜ್ಞಾನ॥

## ಪತ್ತೆ—ನಾಪತ್ತೆ

ಅಣುರೇಣು ತೃಣಕಾಷ್ಟದಲ್ಲಿಯೂ ಅಡಗಿ।
ಪರಮಾತ್ಮ ನಿರುತಿರ್ಪ ಪರಿಪೂರ್ಣನಾಗಿ
ಎಲ್ಲೆಲ್ಲು ತುಂಬಿದ್ದರೂ ಆತ ಇಲ್ಲಿ ನಾಪತ್ತೆ।
ನೆನೆಯದೇ ಇರುವವರ ಮನದಲ್ಲಿ ಮತ್ತೆ॥

ಹೆಗ್ಗಡವಾಡಿ ಗುರುಸಿದ್ದಪ್ಪ.



# ಜನಪದ ಸಾಹಿತ್ಯದಲ್ಲಿ ಪ್ರಣಯ ಪ್ರಸಂಗ

—ರಮಾಕುಮಾರಿ

ಜನಪದ ಸಾಹಿತ್ಯ ಒಂದು ವಾಚಕ ಪರಂಪರೆ. ಪರಂಪರಾನುಗತವಾಗಿ ಕಿವಿಯಿಂದ ಕಿವಿಗೆ, ಬಾಯಿಂದ ಬಾಯಿಗೆ ಪ್ರಸಾರವಾಗುವ ಜನ ಸಾಮಾನ್ಯರ ಸಾಹಿತ್ಯ ಸೃಷ್ಟಿ. ಇದರಲ್ಲಿ ಓದು ಬರಹದ ಪಾತ್ರವಿಲ್ಲ. ಇದೊಂದು ಅಲಿಖಿತ ಸಾಹಿತ್ಯ. ಈ ಸಾಹಿತ್ಯದಲ್ಲಿ ಅಂದಂದಿನ ಕಾಲದ ಜನಜೀವನದ ಆಂತರಿಕ–ಬಾಹ್ಯ ಆಗುಹೋಗುಗಳು ಆಗಿನ ಸಂಸ್ಕೃತಿಯು ರೂಪಿತವಾಗಿದೆ. ಹಲವಾರು ಕಡೆ ಸಾಹಿತ್ಯಕ ಅಂಶಗಳೊಡನೆ ಸಂಸ್ಕೃತ ಶೈಲಿಯ ವರ್ಣನೆಗಳೂ ಸಹ ಕಂಡು ಬರುತ್ತವೆ. ಇದರಲ್ಲಿ ನೀತಿಕಥೆ, ಆದರ್ಶ, ಜೀವನ ಮೌಲ್ಯಗಳೂ, ಬದುಕಿನ ನಾನಾ ಮುಖಗಳ ಪರಿಚಯವೂ ಕೂಡಾ ಆಗುತ್ತದೆ. ಬಾಳಿನ ನಗ್ನ ಕಠೋರ ಸತ್ಯವನ್ನು ಎತ್ತಿ ತೋರಿಸುತ್ತದೆ. ಹಲವು ರೀತಿಯ ಸಾಂಕೇತಿಕತೆಯಿಂದ ಕೂಡಿದ ಶಬ್ದಗಳು ಜನರ ಪ್ರತಿಭೆಯನ್ನು ಬೆಳಕಿಗೆ ತರುತ್ತವೆ. ಇವುಗಳಲ್ಲಿ ಭಾವಗೀತೆಯ ಅಂಶ, ಭಾವ ತೀವ್ರತೆಯೂ ತುಂಬಿ ಬರುತ್ತದೆ. ಜನರ ದುಃಖದ ಆವೇಗ, ನೋವಿನ ಆಳ, ಒಲವಿನ ಸಾಕ್ಷಾತ್ಕಾರವನ್ನು ಕಾಣಬಹುದು.

ಜನಪಧ ಸಾಹಿತ್ಯದಲ್ಲಿ ಪ್ರಣಯ ಜೀವನವು ಬೆರೆತಿರುವುದು ದೈವೀಕೃಪೆ. ಮಾನವನ ಜೀವನದಲ್ಲಿ ಇದೊಂದು ಅನಿವಾರ್ಯ ಪ್ರಸಂಗ. ಬಾಳು ಪೂರ್ಣವಾಗಿ ಸುಂದರವಾಗಬೇಕಾದರೆ ಇದು ಅಗತ್ಯ. ಇಲ್ಲವಾದರೆ ಜೀವನ ಅಪೂರ್ಣವೆಂದು ಭಾವಿಸಿದ್ದ ಆ ಜನ ರಸಿಕ ಸಾಹಿತಿಗಳಾಗಿದ್ದರು. ಪ್ರಕೃತಿ ಪುರುಷರು ಜಗತ್ತಿನ ಮುನ್ನಡೆಯ ಸೃಷ್ಟಿಕರ್ತರು. ನೈಸರ್ಗಿಕವಾಗಿ ಒಬ್ಬರಿಗೊಬ್ಬರು ಹಂಬಲಿಸುವಂತಾಗುತ್ತದೆ. ಈ ರೀತಿಯ ಪ್ರೀತಿಯ ತಂತು ಇಬ್ಬರ ಮನವನ್ನು ಬೆಸೆಯುತ್ತದೆ. ಇದು ಬಿಡಲಾರದ ಬಂಧನವಾದಾಗ ಪ್ರೇಮಕ್ಕಾಗಿ ಒಬ್ಬರಿಗೊಬ್ಬರು ತಮ್ಮನ್ನು ತಾವೇ ಬಲಿಗೊಡಲು ಸಿದ್ಧರಾಗುತ್ತಾರೆ. ಅಂತೆಯೇ ಎರಡು ಜೀವಗಳೂ ಜೀವನ ಸಂಗಾತಿಗಾಗಿ ಹಂಬಲಿಸಿ ಆ ನೆನಪಿನಲ್ಲಿಯೇ ಹಾಡಿ ಕುಣಿಯುತ್ತವೆ. ತಾವು ಜೊತೆ ಜೊತೆಯಾಗಿ ನಲಿದ ಸವಿ ನೆನಪೇ ಅವರಿಗೊಂದು ಚೇತನವವನ್ನು ತುಂಬಿ ತಂದು ಬಾಳಿಗೊಂದು ಸ್ಫೂರ್ತಿ ನೀಡಿ ಎಂತಹ ನೋವಿನಲ್ಲೂ ನಲಿಯುವಂತಹ ಶಕ್ತಿ ನೀಡುತ್ತದೆ. ಎಂದಾಗ ಆ ಪ್ರಣಯ ಜೀವನ ಪ್ರಣಯಿಗಳ ಬಾಳಿಗೆ ಸ್ಫೂರ್ತಿ ಕೀರ್ತಿಯಾಗಿ ನಿಲ್ಲಬಲ್ಲದು ಎಂದೆನಿಸುತ್ತದೆ.

ತಾನು ಮೆಚ್ಚಿದ ಕನ್ಯೆಯನ್ನು ಮಾತನಾಡಿಸುವ ಸಲುವಾಗಿ ಅವಳ ದಾರಿ ಕಾಯುವ ಪುರುಷ ಅವಳು ನೀರಿಗೆ ಬರುವಾಗ ದಾರಿ ಕಾಯ್ದು, ಅವಳನ್ನು ತಡೆದು,—

"ನೀರಿಗೋಗೋ ಹೆಣ್ಣೇ ನಿಲ್ಲೇ ನಾ ಬರುತೀನಿ
ನಿನ್ನಾಣೆ ನಿನ್ನ ಕೊಡದಾಣೆ। ನಿನ್ನ ಕೊರಳಿನ ಬಣ್ಣದ ಸರದಾಣೆ
ಕೈ ಬಳೆಯಾಣೆ। ನೀರ ಹೊಳೆಯಾಣೆ."

ಎಂದು ಎಲ್ಲದರ ಮೇಲೆ ಆಣೆ ಇಡುತ್ತ ತನ್ನ ಬಯಕೆಯನ್ನು ಸೂಚ್ಯವಾಗಿ ತಿಳಿಸಿದಾಗ, ಆ ಹೆಣ್ಣು,—

"ಬಣ್ಣದ ಸರದ ಮೇಲ್ಕಣ್ಣು....
ಹಣ್ಣಲ್ಲವೇನೋ ಮೆಲುವೋಕೆ। ನಿಮ ಕುಲದ
ಹೆಣ್ಣಲ್ಲವೇನೋ ತರುವೋಕೆ."

ಎಂದು ತನ್ನ ಮನದಾಳದ ಇಂಗಿತವನ್ನು ತಿಳಿಸುತ್ತಾಳೆ. ಇಲ್ಲಿ ನಮಗೆ ಈರ್ವರೂ ವಿಭಿನ್ನ ಜಾತಿಯವರೇನೋ ಎಂಬ ಸಂಶಯ ಬರುತ್ತದೆ. ಆದ್ದರಿಂದಲೇ ಆ ಹೆಣ್ಣು ತನ್ನ ಪುರುಷನಿಗೆ, ನಿಮ್ಮ ಕುಲದಲ್ಲಿ ಹೆಣ್ಣಿಲ್ಲವೇನು? ಎಂದು ಕೇಳುತ್ತಾಳೆ. ಪ್ರಕೃತಿಯ ಮುಂದೆ ಎಲ್ಲರೂ ತಲೆಬಾಗಬೇಕು. ಪ್ರೀತಿ ಜಾತಿ ಕುಲವನ್ನರಸುವುದಿಲ್ಲ. ಎಂಬ ವಿಷಯವನ್ನು ಜನಪದ ಸಾಹಿತ್ಯವೂ ಸಾರುತ್ತಿದೆ. ಇಲ್ಲಿ ಇಬ್ಬರೂ ಪ್ರಣಯ ಜೀವನಕ್ಕೆ ಮಾರು ಹೋಗುತ್ತಾರೆ. ಅಲ್ಲಿಂದ ಮುಂದೆ ಅವರ ಪ್ರಣಯ ಜೀವನ ಮುಂದುವರೆಯುತ್ತದೆ.

ಪ್ರಿಯ ಪ್ರೇಯಸಿಯರು ಆಗಾಗ್ಗೆ ಭೇಟಿ ಮಾಡಿ ಅಗಲುವಾಗ ಅವರು ಅನುಭವಿಸುವ ವಿರಹ ವ್ಯಥೆ ಅಷ್ಟಿಷ್ಟಲ್ಲ. ಒಬ್ಬರನ್ನೊಬ್ಬರು ಅಗಲಲಾರದೆ ಅಗಲುತ್ತಾರೆ. ಅದಕ್ಕೆ ಮುಂಚೆ ಪ್ರೇಯಸಿ ತನ್ನ ಪ್ರಿಯಕರನಿಗೆ, —

"ಬರುವೇನು ಜಾಣ ದಾರಿಯ ಕಾಯೋ
ಬತ್ತಿದ ಬಾಯಿಗೆ ಎಳನೀರು, ನಿಂಬೆಹಣ್ಣು
ತರುವೆನು ಜಾಣ"

ಎಂಬುದಾಗಿ ಹೇಳಿ ಆದಷ್ಟು ಬೇಗ ಬರುವೆನೆಂದು ಭರವಸೆ ನೀಡುವಳು, ಆದರೂ ಗಂಡಿಗೆ ಅನುಮಾನ.— ಬರುವಳೋ ಇಲ್ಲವೋ ಎಂಬ ಸಂಶಯದಿಂದ, —

"ಆಚೆ ದಡದಲಿ ನೀನು। ಈಚೆ ದಡದಲಿ ನಾನು
ಭಾಷೆ ತಾರೆಣ್ಣೆ ಬಲಗೈಲಿ।
ನಾನು ಭಾಷೆ ತಪ್ಪೊಂತ ಮಗನಲ್ಲ"

ಎಂಬುದಾಗಿ ಭಾಷೆ ತೆಗೆದುಕೊಳ್ಳುತ್ತಾನೆ. ಆಗಲೇ ಅವನಿಗೆ ನಂಬಿಕೆ. ಹೀಗೆ ಭರವಸೆ ಪಡೆದು ಹಿಂತಿರುಗುತ್ತಾನೆ.

ಹೀಗೆ ಆ ಪ್ರಣಯಿಗಳು ಆಗಾಗ್ಗೆ ಭೇಟಿ ಮಾಡುವಾಗ ಪುರುಷ ತನ್ನ ಪ್ರೇಯಸಿಯ ರೂಪ ರಾಶಿಯಲ್ಲಿ ಮೈಮರೆತು ಓಲಾಡುತ್ತಾನೆ. ಪ್ರಣಯ ಲೋಕದಲ್ಲಿ ವಿಹರಿಸುತ್ತಿರುವಾಗ ಅವನಿಗೆ ಸಮಾಜದ ಭಯವಾಗಲೀ, ಬಾಹ್ಯ ಪ್ರಪಂಚದ ಅರಿವಾಗಲೀ ಇರುವುದಿಲ್ಲ. ಆದರೆ ಸಹಜವಾಗಿ ಸ್ತ್ರೀಗೆ ಇಂತಹ ಭಯ ಹೆಚ್ಚು ಅಂತೆಯೇ ಅವಳು, —

"ಪಾರಿವಾಳದ್ಹಂಗೆ ಸುಳಿಯೋನೆ, ನನಗೆಳೆಯ
ದೂರು ಬರುತಾದೆ ನಿನ ಮೇಲೆ."

ಎಂದು ಎಚ್ಚರಿಸುತ್ತಾಳೆ, ಆದರೂ ಅವನಿಗೆ ಭಯವಿಲ್ಲ ಸಮಾಜಕ್ಕಾಗಿ ಅವನು ಹೆದರುವುದಿಲ್ಲ.

"ದೂರು ಬಂದಾರೆ ಬರಲಿ
ವೈಯಾರ ನಿನಗಿರಲಿ"

ಎಂದು ನುಡಿಯುತ್ತಾನೆ. ತಾನೊಲಿದ ಹೆಣ್ಣು ತನ್ನವಳಾಗಲಿ ಎಂದು ಕಂಡ ಕಂಡ ದೇವ-ದೇವತೆಗಳಿಗೆಲ್ಲಾ ಹರಕೆ ಹೊರುತ್ತಾನೆ. ಅವಳಿಗಾಗಿ ಏನೆಲ್ಲಾ ತ್ಯಾಗ ಮಾಡಲು ಸಿದ್ಧನಾಗುತ್ತಾನೆ. ತನ್ನ ಪ್ರೇಯಸಿಯ ವಿನಹ ಅವನಿಗೆ ಬೇರೇನೂ ಬೇಕಿಲ್ಲ ಇಂತಹ ಪ್ರಣಯ ಜೀವಿಗಳ ಜೀವನ ಜನಪದಗಳಲ್ಲಿ ಹಲವಾರು ರೀತಿಗಳಲ್ಲಿ ಕಂಡು ಬರುತ್ತದೆ.

ದುರದೃಷ್ಟದಿಂದಾಗಿ ತಾನು ಒಲಿದ ಹೆಣ್ಣು ಅನಿವಾರ್ಯ ಕಾರಣಗಳಿಂದಾಗಿ ಬೇರೊಬ್ಬನ ಮಡದಿಯಾಗಬೇಕಾಗುತ್ತದೆ. ಆಗ ಅವನ ದು:ಖ ವರ್ಣಿಸಲಸಾಧ್ಯ, ತನ್ನ ಪ್ರೇಯಸಿಯ ವ್ಯಾಮೋಹದಿಂದ ಬದುಕಿ ಉಳಿಯುತ್ತಾನೆ. ಆದರೆ ವಿರಹ ಯಾತನೆ ತಾಳಲಾರನು. ಏನೇ ಆದರೂ ತನ್ನ ಹಳೆಯ ಗೆಳತಿಯ ಮೇಲಿನ ವ್ಯಾಮೋಹ-ಪ್ರೀತಿ ಅಳಿಯುವುದಿಲ್ಲ. ಬೇರೊಂದು ಹೆಣ್ಣನ್ನು ತನ್ನ ಜೀವನಸಂಗಾತಿಯಾಗಿ ಮಾಡಿಕೊಳ್ಳಲು ಇಚ್ಛಿಸಲಾರನು.

ವಿರಹಾಗ್ನಿಯಲ್ಲಿ ಬೆಂದು ಬಳಲಿ ಕೊನೆಗೆ ಏನೋ ಒಂದು ನೆಪದಿಂದ ಅವಳ ಮನೆಗೆ ಬರುತ್ತಾನೆ, ಪ್ರೇಮದ ಮಡುವಿನಲ್ಲ ಬಿದ್ದ ಅವನಿಗೆ ಯಾವ ಪ್ರಜ್ಞೆಯೂ ಇರುವುದಿಲ್ಲ. ಇವನು ಬಂದುದು ಆಕೆಗೆ ತಿಳಿಯುತ್ತದೆ. ಅವರೀರ್ವರ ಪ್ರಣಯ ಅಂತರ್ಗಾಮಿಯಾಗಿ ಪ್ರವಹಿಸುತ್ತಿರುವಾಗ ಪ್ರೇಯಸಿಗೆ ಪಕ್ಕದಲ್ಲಿದ್ದ ಗಂಡನನ್ನು ದೂರಮಾಡಿ ಹೋಗುವ ಎದೆಗಾರಿಕೆ ಇಲ್ಲದಿದ್ದರೂ ತನ್ನ ಹಳೆಯ ಗೆಳೆಯನನ್ನು ನೆನೆದು ಅವಳ ಹೃದಯ ಕರಗಿ ನೀರಾಗಿ ಹರಿಯುತ್ತದೆ. ಆದರೆ ಇವಳ ಸಂಕಟ ಅವನಿಗೆ ಅರಿವಾಗುವುದಿಲ್ಲ. ಅವಳಿಗಾಗಿ ಕಾದಿದ್ದು, ಅವಳ ದನಿಯನ್ನಾದರೂ ಕೇಳಿ ಹೋಗುವ ಆಸೆಯನ್ನು ವ್ಯಕ್ತಪಡಿಸುತ್ತಾನೆ. ಈ ಪ್ರಿಯಕರ ಒಂದು ರೀತಿಯಲ್ಲಿ ಹುಚ್ಚನೇ ಆಗಿದ್ದಾನೆ. ಪ್ರೇಮಭಂಗ ಹೃದಯವನ್ನೇ ಒಡೆಯುವುದಂತೆ. ಅಂತಯೇ ಈ ವ್ಯಕ್ತಿ ನಿರಾಶನಾಗಿ ವ್ಯಥೆಯಿಂದ ಬಳಲಿದ್ದಾನೆ. ಆದರೆ ಆ ಹುಡುಗಿಯ ಮನಸ್ಥಿತಿ ಡೋಲಾಯಮಾನವಾಗಿದೆ. ಒಂದು ಕಡೆ ಕಟ್ಟಿಕೊಂಡ ಗಂಡನ ಭಯ ಮತ್ತೊಂದೆಡೆ ತನಗಾಗಿ ಹಂಬಲಿಸುವ ಪ್ರಿಯಕರನ ಬಗ್ಗೆ ಕನಿಕರ, ಹೇಗಾದರೂ ಮಾಡಿ ಅವನಿಗೆ ಸಮಾಧಾನ ಹೇಳಿ ಕಳುಸಬೇಕೆಂದು,

"ಪಂಜರದ ಗಿಳಿ ನಾನು ಬರಲಾರೆ ತಾವಿಲ್ಲ
ದನಿತೋರಲಾರೆ ತರವಿಲ್ಲ! ನನಗೆಳೆಯ
ಗಿಳಿಯಾಗಿ ಬಾರೋ ಹೊಸಲೀಗೆ

ಎಂದು ನುಡಿದು ತನ್ನ ಅಸಾಯಕತೆಯನ್ನು ವ್ಯಕ್ತಪಡಿಸುತ್ತಾಳೆ. ಇದರಿಂದ ಸಮಾಧಾನ ಹೊಂದದ ಪ್ರಿಯಕರ ಕಾತುರತೆಯಿಂದ ಅವಳ ದರ್ಶನಕ್ಕಾಗಿ ಹಂಬಲಿಸುತ್ತಾನೆ. ಉದ್ವೇಗದಿಂದ ಅವಳನ್ನು ಕಾಣುವ ಆತುರ ವ್ಯಕ್ತ ಪಡಿಸುತ್ತಾನೆ. ಆಗ ಪ್ರೇಯಸಿ,....

"ಕದ ಹೆಂಗೆ ತೆರೆಯಾಲೆ। ಮಗ್ಗಲಲ್ಲೆವನೆ ಮನೆಪುರುಷ"
ನೀನು ಮೊಗ್ಗಾಗಿ ಬಾರೋ ನನ್ನ ತುರುಬೀಗೆ"

ಎಂದು ಅವನಿಗಾಗಿ ಮರುಗಿ ಪರಿ ಪರಿಯಾಗಿ ಸಂತೈಸುತ್ತಾಳೆ. ಅಂತಹ ಸ್ಥಿತಿಯಲ್ಲಿ ಆಕೆ ಏನೂ ಮಾಡಲಾರದವಳಾಗಿದ್ದಾಳೆ. ತನ್ನ ಪತಿಯನ್ನು ಬಿಟ್ಟು ಪರಪುರುಷನನ್ನು ಬಯಸುವುದು ಧರ್ಮ ನಿಷಿದ್ಧ. ಆದರು ಒಮ್ಮೆ ಮಾರು ಹೋದ ಪ್ರೇಮ ಜೀವ ಕರಗಿ ಹಂಬಲಿಸುತ್ತಿದೆ. ಈ ಯಾತನೆಯನ್ನು ತಾಳಲಾರದ ಪ್ರಿಯಕರ. ಅವನ ಸ್ಥಿತಿ ನೋಡಿ ಏನೋ ಮಾಡಲಾರದ ಪ್ರೇಯಸಿರಿ

ಈ ಸ್ಥಿತಿಯಲ್ಲಿದ್ದ ಪ್ರಿಯಕರ ಕೊನೆಗೆ ಪ್ರೇಮಭಂಗವನ್ನು ತಾಳಲಾರದೆ ಅವಳನ್ನು ಬಿಟ್ಟು ಬದುಕಿರಲಾರೆ ಎನ್ನುವ ಘಟ್ಟಕ್ಕೆ ಬಂದು, ಪ್ರಣಯ ದುರಂತದಿಂದ ಕನಲಿ ಕಡೆಗೆ ಆ ಊರ ಮುಂದಿನ ಹೊಳೆಯಲ್ಲಿ ಮುಳುಗಿ ಸಾವನ್ನಪ್ಪುತ್ತಾನೆ. ಮರು ದಿನ ಬೆಳಿಗ್ಗೆ ಈ ವಿಷಯ ತಿಳಿದ ಪ್ರೇಯಸಿಯ ದುಃಖ ಮುಗಿಲು ಮುಟ್ಟುತ್ತದೆ. ಅವನಿಗಾಗಿ ಇವಳ ಕರುಣೆ ಕರಗಿ ಕಣ್ಣೀರಾಗಿ ಹರಿಯುತ್ತದೆ, ಆದರೇನು ? ಇವಳ ಮನದ ಧಾವಾಗ್ನಿ ತಂಪಾದೀತೇ ?...... ಮನ ತಡೆಯದೇ ಹೊಳೆಯ ಬಳಿಗೆ ನೀರು ತರುವ ನೆಪದಿಂದ ಹೋಗುತ್ತಾಳೆ. ಅಲ್ಲಿ ಅವಳ ದುಃಖ ಮೇರೆ ಮೀರುತ್ತದೆ. ಆ ಭರದಲ್ಲಿ ಕೊಡ ಉರಳಿ ಹೊಳೆಗೆ ಬಿದ್ದು ಒಡೆದು ಹೋಗುತ್ತದೆ. ಇವಳ ದು:ಖವನ್ನು ಕಂಡ ಅವಳ ಗೆಳತಿಯರು ಸತ್ಯಾರ್ಥವನ್ನು ತಿಳಿಯದೇ ಕೊಡ ಒಡೆದುದಕ್ಕಾಗಿ ಅಳುವಳೆಂದು ತಿಳಿದು,—

"ಮಣ್ಣಿನ ಕೊಡಕ್ಯಾಕೆ ಕಡುದು:ಖ"

ಇದ್ದಲ್ಲದಿದ್ದಲೆ ಇನ್ನೊಂದು ತಂದರಾಯ್ತೆಂದು ಸಮಾಧಾನ ಮಾಡುತ್ತಾರೆ. ಆದರೆ ಇವಳ ದೃಷ್ಟಿಯಲ್ಲಿ ಅದು ಮಣ್ಣಿನ ಕೊಡವಲ್ಲ. ಅವಳ ಬಾಳಿನಲ್ಲಿ ಹಾಸುಹೊಕ್ಕಾಗಿದ್ದ ಅತ್ಯಮೂಲ್ಯ ಕೊಡವೊಂದು ಹೊಳೆಯಲ್ಲಿ ಮುಳುಗಿತು. ಈ ಅಂತರ್ಯ ಆ ಗೆಳತಿಯರಿಗೇನು ಗೊತ್ತು. ?

"ಅತ್ತೆ ಕಾಣದ್ಹಾಂಗೆ। ಮಾವನೋಡದ್ಹಾಂಗೆ
ಒಪ್ಪದಲಿ ನಾನು ಬಳಸಿದ್ದ ಕೊಡವು
ನುಚ್ಚಾಯ್ತು ನೀರ ಹೊಳೆಯಾಗೆ।"

ಎಂದು ತನ್ನ ಗೆಳತಿಯರಿಗೆ ಹೇಳಿ ಗೋಳಾಡುತ್ತಾಳೆ. ತನ್ನ ಪ್ರಿಯಕರನನ್ನು ಕೊಡಕ್ಕೆ ಹೋಲಿಸಿ ಗೋಳಾಡುತ್ತಾಳೆ.

ಜೀವನ ಪ್ರವಾಹದಲ್ಲಿ ಆ ಪ್ರಿಯಕರ ಸಾವನ್ನಪ್ಪುವುದೇ ಇದರ ಅಂತರಾರ್ಥ. ಇಂತಹ ಹಲವಾರು ಸಾಂಕೇತಿಕ ನುಡಿಗಳು ಓದುಗರ ಮನದಲ್ಲಿ ಕರುಣೆಯ ಕಿರಣಗಳನ್ನು ಬೆಳಗುತ್ತವೆ. ಆ ಪ್ರಿಯ-ಪ್ರೇಯಸಿಯರ ಬಾಳು ವಿರುದ್ಧ ದಿಕ್ಕಿನಲ್ಲಿ ಸಾಗಿದಾಗ ಕರುಳು ಮಿಡಿಯುತ್ತದೆ. ಅವರ ಬಗ್ಗೆ ಕಿಂಚಿತ್ತೂ ಜಿಗುಪ್ಸೆ ಬಾರದೆ, ಅವರ ಜೀವನ ರೀತಿಗೆ ಕರುಣೆಯ ಹೊನಲುಕ್ಕಿ ಹರಿಯುತ್ತದೆ. ಸಮಾಜದ ದೃಷ್ಟಿಯಲ್ಲಿ ಇದು ಅನೈತಿಕ ಬಾಂಧವ್ಯವಾಗಿ ಕಂಡರೂ ಆ ಪ್ರೇಮಿಗಳ ಅಚಲ ಪ್ರೀತಿ ವಾತ್ಸಲ್ಯಕ್ಕೆ, ಪರಿಸ್ಥಿತಿಯ ಕೈಗೊಂಬೆಯಾಗಿ ಕಣಿಯಬೇಕಾಗಿ ಬಂದ ಅವರ ಬಾಳು ವೈಯಕ್ತಿಕ ರೀತಿಯಲ್ಲಿ ಮಾನವೀಯತೆಯ ದೃಷ್ಟಿಕೋನದಿಂದ ನೋಡಿದಾಗ ಅವರ ಪ್ರಣಯ ದುರಂತ ಬಾಳಿನ ಬಗ್ಗೆ ಅತ್ಯಂತ ವೇದನೆಯಾಗುತ್ತದೆ.

ಜನಪದ ಸಾಹಿತ್ಯದಲ್ಲಿ ಇಂತಹ ಹೃದಯ ವಿದ್ರಾವಕ ಪ್ರಣಯ ಪ್ರಸಂಗಗಳು ಬಹಳಷ್ಟಿವೆ. ಪ್ರೇಮ ಭಂಗವುಂಟಾಗಿ ನಿರಾಶಾ ಜೀವನವನ್ನು ನಡೆಸುವ ಪ್ರೇಮಿಗಳ ಬಾಳು ಬಾಳಲ್ಲವೆಂದೆನಿಸುತ್ತದೆ. ಇಂತಹ ಹಲವಾರು ಘಟನೆಗಳನ್ನು ಕಂಡಾಗ ಇಡೀ ಜನ ಜೀವನವೆಲ್ಲಾ ಪ್ರೇಮದ ತಳಹದಿಯ ಮೇಲೆಯೇ ರೂಪಿತವಾಗಿರಬಹುದು ಎಂದೆನಿಸುತ್ತದೆ. —

# ಸಿಸಲೀಯ ಚೋರರು

—ಬಿ. ಸುಬ್ರಾಯ ಅಡಿಗ

ಸುದೂರ ಯುರೋಪಿನಲ್ಲಿರುವ ಸಿಸಲೀಯ ಮನೋಹರ ದ್ವೀಪವೂ ಭಾರತದ ಚಂಬಲ್ ಕಣಿವೆಯಂತಯೇ ಡಕಾಯಿತರ ಸಮಸ್ಯೆಗೆ ಗುರಿಯಾಗಿದೆ, ಸಿಸಲೀಯ ದಸ್ಯುಗಳು ಅಪಹರಣ ಇಲ್ಲವೇ ದರೋಡೆಯಿಂದಲೇ ತೃಪ್ತರಾಗುವುದಿಲ್ಲ. ಅವರು ಅನೇಕ ದೇಶಗಳಲ್ಲಿ ಅಕ್ರಮವಾಗಿ ದ್ಯೂತ ಗೃಹ ಹಾಗೂ ವೇಶ್ಯಾಲಯಗಳನ್ನು ನಡೆಸುತ್ತಾರೆ. ಮಾದಕ ವಸ್ತುಗಳ ಅಂತರಾಷ್ಟ್ರೀಯ ಕಳ್ಳ ಸಾಗಾಣಿಕೆ ನಡೆಸುತ್ತಾರೆ. ಹಣ ಪಡೆದು ರಾಜಕೀಯ ಕೊಲೆಗಳನ್ನು ನೆರವೇರಿಸುತ್ತಾರೆ. ಚುನಾವಣೆಯ ವೇಳೆ ರಾಜಕೀಯ ಕೊಲೆಗಳನ್ನು ನೆರವೇರಿಸುತ್ತಾರೆ, ಚುನಾವಣೆಯ ವೇಳೆ ರಾಜಕೀಯ ಮುಖಂಡರಿಗೆ ಧನ ಸಹಾಯ ಮಾಡಿ ಅವರು ಗೆದ್ದ ಬಳಿಕ ಒಂದಕ್ಕೆ ಹತ್ತು ಪಟ್ಟು ವಸೂಲು ಮಾಡುವುದು ಅವರಿಗೆ ಸಹಜವಾಗಿದೆ, ಅಮೇರಿಕೆಯ ದೊಡ್ಡ ಕಂಪನಿಗಳಲ್ಲಿ ಅವರು ಬಂಡವಾಳ ಹೂಡಿದ್ದಾರೆ,

ಸಿಸಲೀಯ ಈ ದಸ್ಯುಗಳ 'ಮಾಫಿಯಾ" ಎಂಬ ಹೆಸರಿನಿಂದ ಕುಪ್ರಸಿದ್ಧವಾದುದು. ಇದರೆದುರು ರಾಷ್ಟ್ರೀಯ ಗಡಿಗಳು ಗೌಣ: ಏಕೆಂದರೆ ಇದು ಅಂತರಾಷ್ಟ್ರೀಯ ತಂಡ. ಇದರ ಸದಸ್ಯರು ಅದೆಷ್ಟು ಚತುರರೆಂದರೆ ಯುರೋಪ್ ಅಮೇರಿಕಗಳ ಸಂಯುಕ್ತ ಪೋಲೀಸ್ ಪಡೆಯೂ ಇವರ ಚಕ್ರವ್ಯೂಹವನ್ನು ಭೇದಿಸದಾಯಿತು, 'ರಕ್ತ ಬೀಜ' ದಂತಿರುವ ಮಾಫಿಯಾವನ್ನು ಕೊನೆಗೊಳಿಸುವುದು ಅಸಂಭವವಲ್ಲದಿದ್ದರೂ ಸುಲಭ ಸಾಧ್ಯವಲ್ಲ.

೧೯೨೨ ರಲ್ಲಿ ಮೊದಲ ಬಾರಿ ಮುಸಲೋನಿಯ ಫ್ಯಾಸಿಸ್ಟ್ ಸರಕಾರ ಈ ಸಮಸ್ಯೆಯ ಬಗ್ಗೆ ಗಮನ ನೀಡಿ ಮಾಫಿಯಾ ಸದಸ್ಯರನ್ನು ಬಲಾತ್ಕಾರವಾಗಿ ಸೆರೆಹಿಡಿಯಲಾರಂಭಿಸಿತು. ಅವರ ಮೇಲೆ ಕೇಸು ನಡೆದು ಅವರಿಗೆ ದೀರ್ಘಾವಧಿಯ ಶಿಕ್ಷೆ ವಿಧಿಸಲಾಯಿತು. ಇದರಿಂದ ಸರಕಾರದ ಪ್ರತಿಷ್ಠೆ ಹೆಚ್ಚಬೇಕಿತ್ತು. ಆದರೆ ಹಾಗಾಗಲಿಲ್ಲ. ಏಕೆಂದರೆ ಮುಸಲೋನೀ ಸರಕಾರವು ತನ್ನ ರಾಜಕೀಯ ಪ್ರತಿಸ್ಪರ್ಧಿಗಳನ್ನು ಕೊನೆಗಾಣಿಸಿಸಲು ಇದನ್ನು ಅಸ್ತ್ರವಾಗಿ ಬಳಸಿಕೊಂಡಿತು. ನಿರ್ದೋಷಿಗಳನ್ನು ಮಾಫಿಯಾ ಸದಸ್ಯರೆಂಬ ಹೆಸರಿನಿಂದ ಸೆರೆಹಿಡಿದು ಅವರಿಗೆ ದೀರ್ಘಾವಧಿ ಶಿಕ್ಷೆ ನೀಡಿತು, ಹೀಗಾಗಿ ಸರಕಾರ ಜನತೆಯ ಸಹಾನುಭೂತಿ ಪಡೆಯದಾಯಿತು.

ಮಾಫಿಯಾ ಸದಸ್ಯರು ಓತಿಕೇತದಂತೆ ಬಣ್ಣಬದಲಾಯಿಸುತ್ತಾ ಇರುತ್ತಾರೆ. ಎರಡನೇ ವಿಶ್ವಯುದ್ಧದ ವೇಳೆ ಮಾಫಿಯಾ ಮುಸಲೋನಿಯ ವಿರುದ್ಧ ಮಿತ್ರ ರಾಷ್ಟ್ರಗಳಿಗಾಗಿ ಪತ್ತೇದಾರಿಕೆ ನಡೆಸಿತ್ತು. ಅಮೇರಿಕೆಯ ಸೈನ್ಯ ಸಿಸಲೀಯ ನೆಲದಲ್ಲಿ ಕಾಲಿಟ್ಟಾಗ ಅದಕ್ಕೆ ಮಾಫಿಯಾದಸದಸ್ಯರೇ ಮಾರ್ಗದರ್ಶಕರಾದರು. ಮಾಫಿಯಾ ಅಮೇರಿಕನ ಸೇನೆಗೆ ಸಹಾಯ ಮಾಡಿತು. ಪ್ರತಿಯಾಗಿ ಅಮೇರಿಕನರೂ ಅದಕ್ಕೆ ಬಹುಮಾನವಿತ್ತರು.

ಈಗ ಬದಲಾದ ಪರಿಸ್ಥಿತಿಯಲ್ಲಿ ಮಾಫಿಯಾ ಹೊಸ ಮುಖವಾಡ ಧರಿಸಿತು. ಅದರ ಸದಸ್ಯರು ದಸ್ಯುಗಳ ಬದಲು ರಾಜಕೀಯ ಕಾರ್ಯಕರ್ತರಾದರು. ಅವರು ಇಗರ್ಜಿಗಳಿಗೆ ದೊಡ್ಡ ದೊಡ್ಡ ದಾನಗಳನ್ನಿತ್ತು ಅವುಗಳಿಂದ ಶಹಭಾಸ್‌ಗಿರಿ ಪಡೆಯುವರು. ಆದರೆ ಮುಖವಾಡದಿಂದಲೇ ಮನುಷ್ಯನ ಸ್ವಭಾವ ಬದಲಾಯಿಸುತ್ತದೆ! ಅವರು ಪರದೆಯ ಹಿಂದೆಯಿದ್ದು ತಮ್ಮ ಸಮಾಜ ವಿರೋಧೀ ಕಾರ್ಯಗಳನ್ನು ಮುಂದುವರಿಸಿದರು. ಸಿಸಲೀಜನತೆ ಮಾಫಿಯಾದ ಎರಡೂ ರೂಪಗಳನ್ನು ಚೆನ್ನಾಗಿ ಗುರುತಿಸುತ್ತಿತ್ತು. ಆದರೆ ಭಯದಿಂದಾಗಿ ಏನೂ ಹೇಳುತ್ತಿರಲಿಲ್ಲ. ನೀರೊಳಗಿದ್ದು ಮೊಸಳೆಯೊಡನೆ ಹಗೆತನ ಕಟ್ಟಲುಂಟೆ ?

**ಸಿಸಲೀಯ ಗಾಂಧಿ:—**

ದಾನಿಲೋ ದೋಲ್ಚೀ ಸಿಸಲೀಯ ಗಾಂಧಿಯೆಂದು ಹೆಸರಾದವರು, ಅವರು ಮಾಫಿಯಾದ ವಿರುದ್ಧ ಪ್ರಚಾರ ಮಾಡಿದವರಲ್ಲಿ ಮೊದಲಿಗರು. ಅವರು ಮೂಲತ: ಉತ್ತರ ಇಟಲಿಯ ನಿವಾಸಿಗಳು, ಅವರು ೧೯೫೨ ರಲ್ಲಿ ಸಿಸಲೀಯ ನೆಲದ ಮೇಲೆ ಕಾಲಿಟ್ಟಾಗ, ಯಾರಿಗೂ ಅವರ ಪರಿಚಯ ಇರಲಿಲ್ಲ. ಆದರೆ ಆರೇ ವರ್ಷಗಳಲ್ಲಿ ಅಂದರೆ ೧೯೫೮ ರ ಕೊನೆಯೊಳಗೆ ಅವರು ಅಂತರರಾಷ್ಟ್ರೀಯ ಖ್ಯಾತಿ ಪಡೆದ ವ್ಯಕ್ತಿ ಎನಿಸಿದರು. ಪ್ರಖ್ಯಾತ ಲೇಖಕರಾದ ಆಲ್ಡಸ್-ಹಕ್ಸಲೇ ಅವರನ್ನು ೨೦ ನೇ ಶತಮಾನದ ಅದ್ವಿತೀಯ ಸಂತ" ಎಂದು ಕರೆದಿದ್ದಾರೆ. ರಷ್ಯದ ಸರಕಾರ ಅವರಿಗೆ 'ಲೆನಿನ್ ಶಾಂತಿ" ಪುರಸ್ಕಾರ ನೀಡಿ ಗೌರವಿಸಿತು. ಈ ಖ್ಯಾತಿ ದೋಲ್ಚೀಗೆ ಸುಲಭವಾಗಿ ಸಿಗಲಿಲ್ಲ. ಇದಕ್ಕಾಗಿ ಅವರು ಬಹಳಷ್ಟು ಕಷ್ಟ ಪಡಬೇಕಾಯಿತು. ತಾಯಿ ತಂದೆ ಹಾಗೂ ಪ್ರೇಯಸಿಯ ಪ್ರೀತಿಯನ್ನು ತೊರೆಯಬೇಕಾಯಿತು.

ದೋಲ್ಚೀ ತಮ್ಮ ಪ್ರಖರ ಪ್ರತಿಭೆಯಿಂದ ವಿಪುಲಸಂಪತ್ತು ಸಂಪಾದಿಸಿ ವಿಲಾಸದ ಜೀವನ ನಡೆಸಬಹುದಿತ್ತು. ಅವರು ಇಂಜನೀಯರಿಂಗ್ ಡಿಗ್ರಿ ಪಡೆದವರು. ಸ್ಥಾಪತ್ಯ ಕಲೆಯ ಬಗ್ಗೆ ಅವರು ಬಗ್ಗೆ ಅವರು ಬರೆದ ಶೋಧಗ್ರಂಥ ಸಾಕಷ್ಟು ಪ್ರಶಂಸ ಪಡೆಯಿತು. ಇಂಜಿನೀಯರಿಂಗ್ ಅಥವ ಸಾಹಿತ್ಯದ ಸಾಧನೆಯಿಂದ ಧನ ಹಾಗೂ ಕೀರ್ತಿ-ಎರಡನ್ನೂ ಗಳಿಸಬಹುದಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ.

**ದಸ್ಯುಗಳೊಡನೆ ಸೆಣಸಾಟ:—**

ಅವರು ಸಿಸಲೀಗೆ ಬಂದಾಗಿನಿಂದ ಮಾಫಿಯದೊಡನೆ ಅವರ ಸೆಣಸಾಟ ನಡದೇ ಇದೆ. ಅವರು ತಮ್ಮ ಮೊದಲ ದಿನವನ್ನು ಬೆಸ್ತರ ಒಂದು ಹಳ್ಳಿಯಲ್ಲಿ ಕಳೆದರು, ಮೀನುಗಾರಿಕೆ ಸಿಸಲೀಯ ಒಂದು ಮಹತ್ವದ ಉದ್ದಿಮೆ. ಇದರಿಂದ ಸಾವಿರಾರು ಜನರ ಜೀವನ ನಡೆಯುತ್ತದೆ. ಆದರೆ ಮಾಫಿಯಾದಿಂದಾಗಿ ಅವರ ಉದ್ದಿಮೆಗೆ ಸಂಚಕಾರ ಒದಗಿದೆ. ಮಾಫಿಯಾದವರ ಬಳಿ ಮೀನು ಹಿಡಿಯುವ ಆಧುನಿಕ ಸಲಕರಣೆಗಳಿದ್ದವು. ಅವರು ರಾತ್ರಿವೇಳೆ ಅಕ್ರಮವಾಗಿ ಸಮುದ್ರದಲ್ಲಿ ದೊಡ್ಡ ದೊಡ್ಡ ಬಲೆ ಹಾಕಿ ಮೀನು ಹಿಡಿಯುತ್ತಿದ್ದರು. ಬೆಳಗ್ಗೆ ಸಿಸಲೀಯ ಎಲ್ಲ ಮಾರುಕಟ್ಟೆಗಳಲ್ಲೂ ಮಾಫಿಯಾದವರ ಮೀನುಗಳೇ ತುಂಬಿ ಹೋಗುತ್ತಿದ್ದವು. ಬೆಸ್ತರಿಗೆ ಏನೂ ಉಳಿಯುತ್ತಿರಲಿಲ್ಲ.

ಬೆಸ್ತರ ದ:ಸ್ಥಿತಿಯ ಕಾರಣವನ್ನರಿತು ದೋಲ್ಚಿ ಅವರನ್ನು ಸಂಘಟಿಸಿದರು. ಮತ್ತು ಗಾಂಧೀಜಯ ಕ್ರಮದಲ್ಲೇ ಹೊಸ ಚಳವಳಿ ಆರಂಭಿಸಿದರು. ಅವರು ಅಲ್ಲಿಯ ಮಾಫಿಯಾದ ಘಾತಕತನ ಹಾಗೂ ಸರಕಾರದ ಔದಾಸೀನ್ಯವನ್ನು ವಿರೋಧಿಸಿ ಸಭೆ ನಡೆಸಿದರು. ನಮ್ಮಿಂದ ಕೆಲಸ ಮಾಡಿಸಿಕೊಂಡು ನಮಗೆ ಹಣಕೊಡಿರಿ ಎಂಬುದೇ ಇವರ ಘೋಷಣೆಯಾಯಿತು. ತಮ್ಮ ಘೋಷಣೆಯನ್ನು ಕಾರ್ಯರೂಪಕ್ಕೆ ತರಲು ಅವರು ಹಾಳು ರಸ್ತೆಯೊಂದನ್ನು ಶ್ರಮದಾನದ ಮೂಲಕ ದುರಸ್ತಿಮಾಡತೊಡಗಿದರು. ಅದು ಹಲವು ವರ್ಷಗಳಿಂದ ದುರಸ್ತಿ ಕಾಣದೆ ಹಾಳು ಬಿದ್ದಿತ್ತು. ಇವರ ಕೆಲಸ ಜೋರಾಗಿ ನಡೆದಿದ್ದಾಗ ದೋಲ್ಚೀ ಹಾಗೂ ಅವರ ಅನುಯಾಯಿಗಳನ್ನು ತಡೆಯಲು ಪೋಲೀಸರು ಬಂದರು. ಸರಕಾರಿ ಭೂಮಿ ಮೇಲೆ ಬಲಾತ್ಕಾರವಾಗಿ ಕೆಲಸ ಮಾಡಬಾರದು ಎಂದು- ಪೋಲೀಸರ ಹೇಳಿಕೆ. ಆದರೆ ದೋಲ್ಚೀ ಕೆಲಸ ನಿಲ್ಲಿಸಿದಾಗ ಪೋಲೀಸರು ಅವರೆಲ್ಲರನ್ನು ಸೆರೆ ಹಿಡಿದರು. ಕೇಸು ನಡೆಯಿತು. ಆಗ ಇಡೀ ಇಟಲಿಯೇ ಇತ್ತ ಗಮನ ಹರಿಸಿತು. ಈ ಕೇಸಿನಿಂದಾಗಿ ಇದು ತನಕ ಯಾರಿಗೂ ತಿಳಿದಿರದ ಸಮಸ್ಯೆ ಎಲ್ಲರಿಗೂ ತಿಳಿಯುವಂತಾಯಿತು. 'ಅಲ್ಲಲ್ಲಿ ದೋಲ್ಚೀಯನ್ನುಳಿಸಿರಿ' ಎಂಬ ಸಮಿತಿಗಳು ಹುಟ್ಟಿ ಬಂದವು. ಕಟ್ಟಕಡೆಗೆ ಸರಕಾರ ದೋಲ್ಚಿಯನ್ನೂ ಅವರ ಅನುಯಾಯಿಗಳನ್ನು

ಬಿಡುಗಡೆ ಮಾಡಬೇಕಾಯಿತು,

ದಾನಿಲೋ ದೋಲ್ಚಿ ಗಾಂಧೀಜಿಯ ವಿಚಾರಗಳಿಂದ ತುಂಬ ಪ್ರಭಾವಿತರಾಗಿದ್ದಾರೆ, ಗಾಂಧೀಜಿಯ ಪುಣ್ಯ ದಿನದಂದು (ಜನವರಿ 30) ಅವರೂ ಅವರ ಅನುಯಾಯಿಗಳೂ ಉಪವಾಸ ಮಾಡುತ್ತಾರೆ. ಅವರು ಅಲ್ಲಲ್ಲಿ ಕೃಷಿ ವಿಕಾಸ ಕೇಂದ್ರ' ಗೃಹ ಉದ್ಯೋಗ ತರಬೇತಿ ಕೇಂದ್ರ- ಮೊದಲಾದವನ್ನು ಆರಂಭಿಸಿದರು. ಅವರು ಪ್ರಾರಂಭಿಸಿದ ಸನಿವಾಸ ಪಾಠಶಾಲೆ (Residential School)ಗಳಲ್ಲಿ ಮಾಫಿಯಾದ ಮಕ್ಕಳೂ ಕಲಿಯುತ್ತಿದ್ದಾರೆ. ಅವರಲ್ಲಿ ಮುಖ್ಯವಾಗಿ ಜೈಲಿನಲ್ಲಿರುವ ಮಾಫಿಯಾ ಸದಸ್ಯರ ಮಕ್ಕಳು ಮಾಫಿಯಾದವರ ದೌರ್ಜನ್ಯಕ್ಕೀಡಾಗಿ ತಂದೆಯನ್ನು ಕಳೆದುಕೊಂಡ ಮಕ್ಕಳೂ ಕಲಿಯುತ್ತಾರೆ. ಸಿಸಲೀಯ ಅಧಿಕಾರಿಗಳ ಭ್ರಷ್ಟಾಚಾರ, ಇಗಜೀಯ ಅಸಹಿಷ್ಣುತೆ ಹಾಗೂ ಮಾಫಿಯಾದ ಒಳಸಂಚುಗಳನ್ನು ಬಹಿರಂಗಗೊಳಿಸಿದುದರಿಂದಾಗಿ ದೋಲ್ಚೀಗೆ ಎಷ್ಟೋ ಜನ ವಿರೋಧಿಗಳಾಗಿದ್ದಾರೆ ಮಾಫಿಯಾ ಮೂರು ಸಲ ಅವರ ಮೇಲೆ ಘಾತಕ ಆಕ್ರಮಣ ನಡೆಸಿದೆ. ಸಿಸಲೀಯ ಅತಿ ಶಕ್ತಿ ಶಾಲೀ ವ್ಯಕ್ತಿ ಆರ್ಕಬಿಶಪ್ ರೂಫಿನೀ ತನ್ನ ಪತ್ರಗಳಲ್ಲಿ ದೋಲ್ಚೀಯನ್ನು ಬಹಳಷ್ಟು ನಿಂದಿಸಿದ್ದಾನೆ. ಆದರೆ ದೋಲ್ಚೀ ಎದೆಗುಂದಿಲ್ಲ. ತಾವೊಬ್ಬರೇ ಜನತೆಯ ಕಲ್ಯಾಣ ಹಾಗೂ ಸೇವೆಯನ್ನು ಮುಂದುವರಿಸಿದ್ದಾರೆ.

(ಹಿಂದಿಯಿಂದ)

---

ಈ ತಿಂಗಳ ವಿಶೇಷ : ಟಿ: ಚಂದ್ರರಾಜ ಶೆಟ್ಟಿ ಸಿದ್ದಕಟ್ಟೆ

1-8-1961 ಮೈಸೂರು ರಾಜ್ಯದಲ್ಲಿ ಸಾರ್ವತ್ರಿಕ ಕಡ್ಡಾಯ ಶಿಕ್ಷಣ ಜಾರಿಗೆ ಬಂತು.

1-8-1920 ಗಾಂಧೀಜಿಯವರು ಅಸಹಕಾರ ಚಳುವಳಿಯನ್ನು ಪ್ರಾರಂಭಿಸಿದ್ದು.

3-8-1941 ಗಾಂಧೀಜೀಯವರು ವಾರ್ಧಾದಲ್ಲಿ ಖಾದಿ ವಿದ್ಯಾಲಯವನ್ನು ತೆರೆದಿದ್ದು.

3-8-1940 ರಾಜರ್ಷಿಗಳೆಂದೆನಿಸಲ್ಪಟ್ಟ ಮೈಸೂರಿನ ಶ್ರೀ ಕೃಷ್ಣರಾಜೇಂದ್ರ ಒಡೆಯರ ನಿಧನ.

4'8-1914 ಮೊದಲನೆಯ ಮಹಾ ಯುದ್ಧದ ಪ್ರಾರಂಭ.

6-8-1945 ಜಪಾನಿನ ಸೇನಾ ಕೇಂದ್ರವಾದ ಹಿರೋಶಿಮದ ಮೇಲೆ ಅಮೇರಿಕನ್ನರ ಅಣು ಬಾಂಬು ಹಾಕಲ್ಪಟ್ಟಿತು

7-8-1905 ವಂಗಭಂಗ ಚಳವಳಿಯ ಪ್ರಾರಂಭ.

9-8-1945 ಜಪಾನಿನ ನಾಗ ಸಾಕಿಯ ಮೇಲೆ ಎರಡನೆಯ ಅಣುಬಾಂಬು ಹಾಕಲ್ಪಟ್ಟಿತು.

12-8-1762 ಬ್ರಿಟಿಷ್ ಸಾರ್ವಭೌಮ ನಾಲ್ಕನೇ ಜೋರ್ಜರ ಜನನ.

13-8-1910 ದಾದಿಯಾಣಿ ದುಡಿದ ಫ್ಲೋರೆನ್ಸ್ ನೈಟಂಗೇಲಳ ಮರಣ.

14-8-1947 ಮಧ್ಯ ರಾತ್ರಿ ಘಟನಾ ಸಮಿತಿಯ ವಿಶೇಷ ಸಭೆಯು ಜರುಗುತ್ತಿದ್ದಾಗ, ಅಶೋಕ ಚಕ್ರಾಂಕಿತ ರಾಷ್ಟ್ರ ಧ್ವಜವು ಭಾರತೀಯ ಮಹಿಳೆಯರಿಂದ ಅರ್ಪಿಸಲ್ಪಟ್ಟಿತು.

14-8-1942 ಆಗಖಾನ್ ಸೆರೆಮನೆಯಲ್ಲಿ ಮಹದೇವ ದೇಸಾಯಿಯವರ ಮರಣ.

15-8-1937 ಸಂಯುಕ್ತ ಪ್ರಾಂತದ ಗೋಗ್ರ ಮತ್ತು ಸರ್ಜುನದಿಗಳಲ್ಲಿ ನೆರೆ ಬಂದು 60 ಗ್ರಾಮಗಳು ಮುಳುಗಿದವು.

15-8-1950 ಭಾರತದ ಇತಿಹಾಸದಲ್ಲಿ ಈ ತನಕ ನಡೆದ ಭೂಕಂಪಗಳಲ್ಲಿ ಅತಿ ಭಯಾನಕವಾದ ಆಸ್ಸಾಮಿನ ಭೂಕಂಪ ಇದರಿಂದ ಬ್ರಹ್ಮಪುತ್ರ ಮತ್ತು ಅದರ ಉಪನದಿಗಳು ತಮ್ಮ ಸರಿಯಾದ ಮಾರ್ಗವನ್ನು ಬಿಟ್ಟು ಬೇರೆ ದಾರಿಯಲ್ಲಿ ಹರಿಯಲು ಪ್ರಾರಂಭಿಸಿದವು.

17-8-1939 ಸೋವಿಯತ್ ದಳಗಳು ಪೋಲೆಂಡನ್ನು ಪ್ರವೇಶಿಸಿದ್ದು.

18-8-1932 ಪಿಕಾರ್ಡ್ ಮತ್ತು ಕಾಸಿನ್ಸ್ ಎಂಬ ವೈಜ್ಞಾನಿಕರಿಬ್ಬರು ಅಮೇರಿಕದಲ್ಲಿ ವಿಶ್ವಕಿರಣಗಳ ಕುರಿತು ಪರೀಕ್ಷಿಸಲು ಬೆಲೂನಿನಲ್ಲಿ ಹತ್ತೊಂಬತ್ತು ಮೈಲು ಎತ್ತರ ಹಾರಿದರು.



## ಕಾವ್ಯವಾಹಿನಿ



### ಬಿಡದೀ ನಂಬುಗೆ

ಲೇ : ಅಚಲ ಶರಣ್

'ನಿಷ್ಪತ್ತಿಯೆಂಬ ಹಣ್ಣು ತೊಟ್ಟು ಕಳಚಿ ಬೀಳುವಲ್ಲಿ
ಕೂಡಲ ಸಂಗಮದೇವ ತನಗೆ ಬೇಕೆಂದು ಎತ್ತಿಕೊಂಡ'

ಈ ನೆಲದ ಗಾಳಿ ಕುಡಿದವರಿಗೆ
ಅರಿವಿನಂಗಳದಲ್ಲಿ ಕಾಯ್ದವರಿಗೆ
ನಿನ್ನ ಬದುಕಿನೊಳಗಿನ ಸಾರ್ಥಕತೆಗೆ
ಹರ ಶೃಂಗಾರ ಮಾಡಿ ತೋರಿತ್ತು' ಈ ವಚನ

ನೂರು ವರುಷದ ಕೆಡುಕನೆಲ್ಲ ಮಣ್ಣಿಸಿದ ಬಸವನ ಲೀಲೆ
ಕೀರ್ತಿಗೊಲಿಯದೆ ನಿಂತ ಯಾವ ದಾರಿಯ ಹಾಡು ?
ನಿಷ್ಪತ್ತಿ ಹಾಡು!

ಮುವತ್ತೈದು ಬರಿಸಗಳ ಬದುಕು, ಮರ್ತ್ಯದಲಿ
ನಿನಗೆ ಸಾಕೆಂದ ಕೂಡಲ ಸಂಗಮ ದೇವ
ತನ್ನ ಗಣಂಗಳಿಗೆ ವಚನ ಹಾಡಿ

ನಿರಂತರ ಎಚ್ಚರಿಸಲೇನು ನಿನ್ನ ಕರೆದುಕೊಂಡ ?
ಕೂಡಲ ಸಂಗಮ ಇದಕಾಗಿ ಸ್ವಾರ್ಥಿ ಎಂದರೆ
ನಿನಗೆ ಕೋಪ ಬರಬಹುದು.

ನಮ್ಮ ಛಲವನೆಲ್ಲ ಜಾಲರಿ ಹಿಡಿದು ಸಂಗಮ ಸೋಸಿದ.
ನೀ ಹೋಗಬಾರದಿತ್ತು ಅಷ್ಟು ಬೇಗ
ಎನಿಸಿದರೂ, ನಮ್ಮ ತಾಕತ್ತಿಗೆ ಸವಾಲು ಇಟ್ಟು ನಡೆದೆ:
ನಿನ್ನ, ಕೂಡಲ ಸಂಗಮ ಮತ್ತೆ ಇಳೆಗೆ
ಕಳುಹನೆಂದರೆ ಸಾನೆಂಬೆ
ಮರೆವೆನೆಂದಕೂ, ಬಿಡದೀ ನಂಬುಗೆಯ ಮಾಯೆ.

### ತೊಟ್ಟುಗಳು

ಲೇ: ಎಂ. ಜಿ. ನಾಗರಾಜ್

**ಭೇಧ**

ಹರಿದಾರಿ ಲೆಕ್ಕಿಸದೆ ಬೆಳೆದು ಬಂದ ನಡಿಗೆ
ಹರದಾರಿ ಸೇರುವೆಡೆ ಏಕವಾಗುವ ಅಪ್ಪುಗೆ
ಭೇಧ ಅಳಿಸಿದ ಹಾವುಗೆ.

**ಹೇಗೆ**

ಲಿಂಗದೊಳಗಣ ಸಂಗಕ್ಕೆ ಹಾತೊರೆದ
ಅಂಗ ಶೈಥಿಲ್ಯ ಮೆದ್ದು ಬಂದ ರೀತಿಗೆ
ನಮ: ಶಿವಾಯ ತಾ ಹೇಗೆ ?

**ಸೊಡರು**

ನನ್ನ ದಾರಿಗೆ ನಾನೆ ಹಾರುವ ದೀಪ
ಬೆಳಗಿರಲಿ, ಬೆಳೆದಿರಲಿ ನನ್ನ ಸೊಡರು
ಮಾಡಿದ ಸೇವೆ, ಬದುಕಿನಾಗೆ.

**ತೀರ್ಥ**

ಹರಿಯೊಬ್ಬ, ಹರನೊಬ್ಬ-ಜಾಗಟೆ
ಕರಡಿ ವಾದ್ಯದ ಇಕ್ಕಟು ಸದ್ದು
ಗುಡಿಯೊಳಗೆ ಹೊಕ್ಕಾಗ
ಕೊಟ್ಟದ್ದು ಮಡಿತೀರ್ಥ.

## ಪುಸ್ತಕ ವಿಮರ್ಶೆ :-

ಗ್ರಂಥ: 'ಸಟೀಕಾ ಶ್ರೀ ಸೋಮೇಶ್ವರ ಶತಕ'
ತಿದ್ದಿ ಪ್ರಕಟಿಸಿದವರು: ಕವಿಕಿಂಕರ ಚನ್ನಪ್ಪಗೌಡ ಮಾಸ್ತರ, ಗುಲಬುರ್ಗಿ
ಆಕಾರ: ⅛ ಡೆಮಿ. ಪುಟ: 386 ಬೆಲೆ: 11-00

ಗ್ರಂಥ ಅತಿಅಂದವಾಗಿದೆ. ಚನ್ನಪ್ಪಗೌಡ ಮಾಸ್ತರ ಅವರೇ ಪ್ರಾಸ್ತಾವಿಕ ಬರವಣಿಗೆಯಲ್ಲಿ ಹೇಳಿಕೊಂಡಿರುವಂತೆ ಪರಾನ್ನ ಪರವಸತಿ ಪಡೆದು ಪರಿಶ್ರಮದಿಂದ ಹೊರತಂದ ಸಾಹಸ ಕೃತಿ. ಗ್ರಂಥ ಬೆಳೆಸುವಲ್ಲಿ ಲೇಖಕರು ತಮ್ಮದೇ ಆದ ವೈಶಿಷ್ಟ್ಯವನ್ನು ಕಾಪಾಡಿಕೊಂಡು ಬಂದಿದ್ದಾರೆ.

ಪೀಠಿಕಾ ಭಾಗದಲ್ಲಿಯೇ ಪದ್ಯಾಂಕ ಸಹಿತ ವಿಷಯಾನುಕ್ರಮಣಿಕೆ ಕೊಟ್ಟಿರುವುದು ಹೊಸ ಮಾದರಿಯಾಗಿದೆ. ಪ್ರಸ್ತಾವನೆಯಲ್ಲಿ ಕವಿ ಕಾವ್ಯ ವಿಚಾರವನ್ನು ವಿಮರ್ಶಕರಿಗನುಕೂಲವಾಗುವಂತೆ ಸುದೀರ್ಘವಾಗಿ ನಿರೂಪಿಸಿದ್ದಾರೆ. ಪದ್ಯಗಳಿಗೆ ಟೀಕಾ ಬರೆಯುವಾಗ ಸಾಮಾನ್ಯವಾಗಿ ಸರಳಾರ್ಥ, ವಿಶೇಷಾರ್ಥ, ಛಂದೋ, ವ್ಯಾಕರಣ ವಿಶೇಷಾದಿ ಕ್ರಮವನ್ನು ಅನುಸರಿಸಿದ್ದಾರೆ. ಇವೆಲ್ಲಕ್ಕಿಂತಲೂ ಪ್ರಸಂಗಾನುಗುಣವಾಗಿ ಸಾಂದರ್ಭಿಕ ಕಥೆಗಳ ಉಲ್ಲೇಖ ಓದುಗರಿಗೆ ರೋಚಕಲ್ಪ ಬಹೂಪಕಾರಕವಾಗಿದೆ. ಆದರೆ ಕೊನೆಯಲ್ಲಿರುವ ವಿಶ್ವಾತ್ಮಕ ಪರಿಚಯು ಎಂಬ ಅನುಬಂಧವನ್ನು ಕೈಬಿಟ್ಟಿದ್ದರೂ ಕೃತಿಯು ಬೆಲೆಗೆ ಚ್ಯುತಿ ಬರುತ್ತಿರಲಿಲ್ಲ. —

### ವ್ಯವಹಾರ

ತಕೋ ಚಿಂತಾಲು, ಬಿಗಿ ಹಗ್ಗ
ತೆಗೆಬಾಜು, ತೂಗು
ಬಸ್ತಾನಿಗೆ ಹೆಣೆ, ದಲ್ಲಾಳಿಯ ಜಡೆ
ಬಡ್ಡಿಯು ಕ್ಷಮ ಕ್ಷಮ ಮೂಗು

### ಬರವಣಿಗೆ

ಕ್ರಿಕೆಟ್ಟೋ ವಿಕೆಟ್ಟೋ ಇಸ್ಪೇಟಾಟ
ಲಾಟರಿ ಎತ್ತುವ ರೀತಿ
ಮೋಡ ಕವಿದರೂ ಮಳೆ ಬರದ ಫಜೀತಿ
ಬರೆಯಲು ಕುಳಿತರೆ ಖಾತ್ರಿ

## 'ಹಾರೈಕೆ'

ಸಿದ್ಧರುದಿಸಿ ಹರಸಿ ಬೆಳೆಸಿದ ಸ್ಥಳವಿದು ಸಿದ್ಧಗಂಗ ||
ದೊರೆಯುವುದಿಲ್ಲಿ ಎಂದೆಂದು ಸಜ್ಜನರ ಸವಿಯಾದಸಂಗ||

ರಾರಾಜಿಸುತಿಹಳು ತಾಯಿ ಅನ್ನಪೂರ್ಣೆ ಅನವರತ ||
ಈಕೆಯೊಡನೆಯೆ ನೆಲಸಿಹಳು ವಿದ್ಯಾಧಿದೇವತೆ ತನ್ನ
ಕೀರ್ತಿ ಪತಾಕೆ ಬೆಳಗುತ ||

ಅನ್ನದಾನ-ವಿದ್ಯಾದಾನ ನೀಡುತ್ತಿರುವ ಕಲ್ಪವೃಕ್ಷವೀಕ್ಷೇತ್ರ
ಸರ್ವ ಜನರಿಗೂ ಸರ್ವ ಕಾಲದಲ್ಲೂ ಸರ್ವೇಶನಾಣೆಗೂ
ಪ್ರೀತಿ ಪಾತ್ರ.

ಪ್ರಕೃತಿಯು ಕೊಡುಗೆಯಾದ ಈ ಸುಂದರ ತಾಣ
ಇದಕ್ಕೊಂದು ರೂಪವನ್ನಿತ್ತ ಶಿಲ್ಪಿ ಶಿವಕುಮಾರ ಸ್ವಾಮಿ
ಜಾಣರ ಜಾಣ.

ತನುಮನವನೆಲ್ಲ ಇದರ ಏಳ್ಗೆಗಾಗಿ ಮೀಸಲಿರಿಸಿ.
ಬೆಳೆಸಿ ಶೃಂಗರಿಸಿದರು ತಮ್ಮ ಬುದ್ಧಿಯ ಸಾಗರ ಹರಿಸಿ.
ಈಗಿನ ಗೌರೀಶಂಕರರೆ ನೀವು ಇವರ ದಿಟ್ಟ ಹೆಜ್ಜೆಯನ್ನನು
ಸರಿಸಿ.

ಈ ಕ್ಷೇತ್ರವನ್ನು ಅನ್ನ-ವಿದ್ಯೆಯನ್ನು ನಿಮ್ಮ ಹೆಸರಿನ ಶಿಖ
ರದಷ್ಟೇ ಮೇಲೆ ಎತ್ತರಿಸಿ.

ಇದು ನಮ್ಮ ಹಾರೈಕೆ.
ಅನುದಿನದ ಬಯಕೆ.

ಕನ್ನಡ ತಾಯಿಯ ಮಕುಟಕ್ಕೊಂದು ಮಣಿಯಿದು
ಸಿದ್ಧಗಂಗಾ-
ಹೊನ್ನಾಡ ಆಶಾದೀಪವಾಗಿ ಬೆಳಗುತಿಹುದು ಈ ಪಾವನ
ಗಂಗಾ

—ಬಿ. ರಾ. ನರಸಿಂಹಮೂರ್ತಿ.

### ಪುರಂದರದಾಸರ ಬುದ್ಧಿಯ ಮಾತುಗಳು

ಅಲ್ಲದ ಕರ್ಮವ ಆಚರಿಸುವವ ಕೆಟ್ಟ.
ಗರುಡನ ಗೆರೆಯುವಗೆ ಉರಗನ ಭಯವೇಕೆ ?
ಇಕ್ಕಿದವನಿಗುಂಟು; ಮದದಲ್ಲಿ ಸೊಕ್ಕಿದವನಿಗೇನುಂಟು ?

LICENCED TO POST WITHOUT PRE PAYMENT LICENCE NO.3
Registred with the Registrar of News papers for India under No. 17139/69
Reg No. KRN Q-9
SIDDAGANGA Monthly, Siddaganga Mutt-572131, Tumkur Dist.



ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ